ಕೈಪಿಡಿ

# ಬಾದಾಮಿ
# ಬನಶಂಕರಿ
# ಮಹಾಕೂಟ
# ಶಿವಯೋಗ ಮಂದಿರ

(ಹದಿನೆಂಟು ಚಿತ್ರ ಸಹಿತ)

ಲೇಖಕರು
ಅಮೃತ ಮಹಾದೇವ ಅಣ್ಣೀಗೇರಿ, ಎಂ. ಎ.
ಕ್ಯೂರೇಟರ್ ಆಫ್ ಮ್ಯೂಝಿಯಂ,
ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ



ಪ್ರಕಾಶಕರು
ಚಾಲುಕ್ಯ ಪ್ರಕಾಶನ, ಕನ್ನಡ ಪುಸ್ತಕಾಲಯ, ಬೆಳಗಾವಿ

ಪ್ರಕಾಶಕರು
ಗೋವಿಂದ ವೆಂಕಟೇಶ ಚುಳಕಿ
ಕನ್ನಡ ಪುಸ್ತಕಾಲಯ ಖಡೆಬಜಾರ, ಬೆಳಗಾವಿ







ಮುಖಚಿತ್ರ :
ವರಾಹ, ಮಹಾಕೂಟ

**ಪ್ರತಿಗಳು ಸಿಗುವ ಸ್ಥಳ:**

೧. ಕನ್ನಡ ಪುಸ್ತಕಾಲಯ, ಬೆಳಗಾವಿ
೨. ಅಜಿತ ಪ್ರಕಾಶನ, ಬೆಳಗಾವಿ
೩. ವೀರಭಾರತೀ ಪ್ರಕಾಶನ, ಬೆಂಗಳೂರು
೪. ಶಾರದಾಂಬಾ ಪುಸ್ತಕಾಲಯ, ಧಾರವಾಡ
೫. ಸಾಹಿತ್ಯ ಭಾಂಡಾರ, ಹುಬ್ಬಳ್ಳಿ
೬. ಮಹತ್ವದ ರೇಲ್ವೆ ಬುಕ್ ಸ್ಟಾಲುಗಳು

ಬೆಲೆ : ರೂ. ೧ . ೩೫ ೭೦

ಮುದ್ರಕರು
ಹ. ರಾ. ಪುರೋಹಿತ
ಸಂಯುಕ್ತ ಕರ್ನಾಟಕ ಪ್ರೆಸ್, ಹುಬ್ಬಳ್ಳಿ

# ಪ್ರಕಾಶಕರ ಅರಿಕೆ

ಕರ್ನಾಟಕದ ಗತವೈಭವವು ಪ್ರಸಿದ್ಧವಾಗಿದೆ. ಇಂಥ ಕನ್ನಡನಾಡಿನ ಸಾಹಿತ್ಯ, ಸಂಸ್ಕೃತಿ, ಮೂರ್ತಿಶಿಲ್ಪ, ವಾಸ್ತುಶಿಲ್ಪ ಮೊದಲಾದವುಗಳ ತಿರುಳನ್ನು ಇತಿಹಾಸರೂಪದಿಂದ ಸಂಗ್ರಹಿಸಿ, ಪುಸ್ತಕ ಪ್ರಕಟಿಸಿ, ತಾವು ಪ್ರತ್ಯಕ್ಷವಾಗಿ ಕಂಡುದನ್ನು ಅನ್ಯರೂ ನೋಡಿ ತಣಿಯುವಂತೆ ಅನೇಕರು ಮಾಡಿ ಹೋಗಿದ್ದಾರೆ. ಅದೇ ಪದ್ಧತಿಯನ್ನನುಸರಿಸಿ ಶ್ರೀ ಎ. ಎಂ. ಅಣ್ಣೀಗೇರಿ, ಎಂ.ಎ, ಅವರು ಬಾದಾಮಿಯ ಕೈಪಿಡಿಯನ್ನು ಬರೆದದ್ದನ್ನು ಕೇಳಿ ಅದನ್ನು ಪ್ರಕಟಿಸಿದರೆ ಒಂದು ಉತ್ತಮ ಕೆಲಸವಾದಂತಾಗುವದೆನಿಸಿತು. ಅವರಿಗೆ ನಮ್ಮ ಮನೀಷೆಯನ್ನು ವ್ಯಕ್ತಪಡಿಸಲು ಅವರು ' ಆಗಬಹುದು ' ಎಂದರು. ಈ ರೀತಿ ಮೇಲಿನ ಪುಸ್ತಕವನ್ನು ಪ್ರಕಟಿಸಲು ಒಪ್ಪಿಗೆಯಿತ್ತ ಶ್ರೀ ಅಣ್ಣೀಗೇರಿ ಅವರಿಗೆ ನಮ್ಮ ಕೃತಜ್ಞತೆಗಳು.

ಕರ್ನಾಟಕದಲ್ಲಿ ನೋಡತಕ್ಕ ಸ್ಥಳಗಳು ಬೇಕಾದಷ್ಟಿವೆ. ಅವುಗಳಲ್ಲಿ ಬಾದಾಮಿ, ಬನಶಂಕರಿ, ಮಹಾಕೂಟ ಇತ್ಯಾದಿ ಐತಿಹಾಸಿಕ ಸ್ಥಳಗಳೂ ಬರುವವು. ಬಾದಾಮಿಯು ಚಲುಕ್ಯರ ರಾಜಧಾನಿ. ಅದರ ಮೇಣಬಸ್ತಿಗಳ ಸುಪ್ರಸಿದ್ಧ. ಈ ಗ್ರಂಥದಲ್ಲಿ ಬಾದಾಮಿಯ ಸಮಗ್ರ ಅವಶೇಷಗಳ ಹಾಗೂ ಕಲೆಯ ದರ್ಶನವನ್ನು ಗ್ರಂಥಕರ್ತರು ಮಾಡಿಸಿದ್ದಾರೆ. ಬಾದಾಮಿಯನ್ನು ಸಂದರ್ಶಿಸುವವರು ಈ ಕೈಪಿಡಿಯನ್ನು ಅವಶ್ಯವಾಗಿ ಕೊಂಡುಕೊಂಡು ಅದರ ಉಪಯೋಗವನ್ನು ಮಾಡಿಕೊಂಡರೆ ನಮ್ಮ ಮತ್ತು ಲೇಖಕರ ಶ್ರಮ ಸಾರ್ಥಕವಾಯಿತೆಂದು ನಾವು ಭಾವಿಸುತ್ತೇವೆ.

ಈ ಗ್ರಂಥದಲ್ಲಿ ೧೮ ಛಾಯಾಚಿತ್ರಗಳಿದ್ದುದರಿಂದ ಪುಸ್ತಕವು ಹೆಚ್ಚು ಆಕರ್ಷಕವಾಗಿದೆ. ಈ ಗ್ರಂಥದ ಬೆಲೆಯನ್ನು ಈಗಿನ ಕಾಲಮಾನಕ್ಕನುಸರಿಸಿ ಸಾಮಾನ್ಯ ಪ್ರವಾಸಿಕರಿಗೂ ಕೊಂಡುಕೊಳ್ಳಲು ಅನುಕೂಲವಾಗುವಂತೆ ಇಟ್ಟಿದೆಯೆಂದು ಯಾರಾದರೂ ಹೇಳಬಹುದು.

ಕೊನೆಯದಾಗಿ ಸಕಾಲಕ್ಕೆ ಅಂದವಾಗಿ ಮುದ್ರಿಸಿಕೊಟ್ಟ ಸಂಯುಕ್ತ ಕರ್ನಾಟಕ ಪ್ರೆಸ್ಸಿನವರಿಗೂ, ಪಡಿಯಚ್ಚುಗಾರರಾದ ರವಿ ಪ್ರೊಸೆಸ್‌ದ ಮತ್ತು ಶ್ರೀನಿವಾಸ ಕಂಪನಿಯ ಒಡೆಯರಿಗೂ ನಮ್ಮ ಕೃತಜ್ಞತೆಗಳು.

**ಬೆಳಗಾವಿ, ೨೪–೧೨–೫೮** **ಗೋವಿಂದ ವೆಂಕಟೇಶ ಚುಳಕಿ**

## PREFACE

This Guide aims to bring forth all the salient features of Bādāmi which a visitor would like to notice during his visit to the place. It may be mentioned that this is the only Guide to Bādāmi available so far in Kannada which is hoped to cater to the needs of a visitor.

Bādāmi, the capital of the Early Chalukyas, is famous at least from the days of Ptolemy, i. e., second century A. D. upto the present day. It is known for its Rock-cut Hindu and Jaina temples, graceful sculptures, beautiful paintings, fine architectural monuments and a good number of important inscriptions. These historical and cultural remains speak eloquently of the mighty Chalukyas of Bādāmi who held sway over the whole of the Deccan and revived the Hindu faith in Western and Southern India just as the Guptas did in the North.

The unique importance of Bādāmi lies in the following:

1. The earliest caves so nicely excavated by man in Karnatak are found in this place.
2. It is for the first time that we find here in Karnatak the earliest sculptural representations of the episodes from the lives of Kṛṣṇa and Viṣṇu as described in the Harivaṁśa and other Vaiṣṇava Purāṇas.
3. The earliest Śaka dated inscription ( 543 A. D.) hails from Bādāmi.

4. The richness and perfection of Karnatak architecture, sculpture and painting are met with at one place at Bādāmi.
5. The Vātāpi Gaṇapati which the singers of Karnatak music invoke at the beginning of their performance is Gaṇapati, the god of success and learning of this place.
6. " Death is preferable to infamy because it causes pain for a while but disgrace adds pain every day " thus said Kappe-Arabhaṭṭa ( circa 700 A. D. ). Such a valiant person who uttered these words lived at Bādāmi.

The cultural relics at Banaśaṅkari and Mahākūṭa and a note on Shivayōga-mandira also appear in this booklet.

I acknowledge with thanks the help of Dr. B. A. Saletore, M. A., Ph. D. (Lond.), D. Phil. (Geissen), Director, Kannada Research Institute, Karnatak University, Dharwar, who has so kindly permitted me to make use of the photographs of the antiquities at Bādāmi, Banaśankari and Mahākūta illustrated in this book. These beautiful photographs are taken by Sri. K. S. Upadhye, Photographer–Artist of the Institute, to whom my thanks are due.

DHARWAR
19–12–1958

**A. M. Annigeri**

# ಮುನ್ನುಡಿ

ಕಳೆದ ಸುಮಾರು ೧೪೦೦ ವರ್ಷಗಳಿಂದಲೂ ಪ್ರಸಿದ್ಧವಾದ ಬಾದಾಮಿ-ಯನ್ನು ನಾಲ್ಕಾರು ಸಲ ನೋಡಿದ ಮೇಲೆ ಆ ಊರ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅವಶೇಷಗಳನ್ನು ಸಾಮಾನ್ಯ ಜನರಿಗೂ ಸಹ ತಿಳಿಸಿ ಹೇಳುವಂಥ ಮಾರ್ಗದರ್ಶಕ ಗ್ರಂಥವನ್ನು ಏಕೆ ಬರೆಯಬಾರದೆಂಬ ಪ್ರಶ್ನೆ ಉದ್ಭವಿಸಿತು. ಈ ಪ್ರಶ್ನೆಗೆ ಉತ್ತರರೂಪವಾಗಿ ಈ ಪುಸ್ತಿಕೆ ಸಿದ್ಧವಾಗಿದೆ. ಇದರ ರಚನೆ-ಯಲ್ಲಿ ಅವಶೇಷಗಳ ಪ್ರತ್ಯಕ್ಷ ಪರಿಶೀಲನೆ ಮತ್ತು ಕೆಲವು ಆಧಾರಗ್ರಂಥಗಳು ಉಪಯುಕ್ತವಾಗಿವೆ.

ಬಾದಾಮಿ ಮತ್ತು ಮಹಾಕೂಟಗಳ ಹಿರಿಮೆಯನ್ನು ತೋರಿಸುವ ಲೇಖನಗಳು ಇಂಗ್ಲೀಷ ಮತ್ತು ಕನ್ನಡದಲ್ಲಿ ಆಗಾಗ ಪ್ರಕಟವಾಗಿವೆ. ಆದರೆ ಅಲ್ಲಿಯ ಸಮಗ್ರ ಅವಶೇಷಗಳ ಪರಿಚಯಾತ್ಮಕ ಗ್ರಂಥ ಇದೂವರೆಗೂ ಇದ್ದಿಲ್ಲ. ಈ ಕೊರತೆಯನ್ನು ಕೆಲಮಟ್ಟಿಗಾದರೂ ಹೋಗಲಾಡಿಸಲು ಇಲ್ಲಿ ಪ್ರಯತ್ನಿಸಿದೆ.

ಮೇಣಬಸ್ತಿ (ಗುಹೆ)ಗಳ ಸಲುವಾಗಿ ಪ್ರಸಿದ್ಧವಾದ ಬಾದಾಮಿ, ಪುಣ್ಯ-ಕರ ಧಾರ್ಮಿಕ ಕ್ಷೇತ್ರಗಳಾದ ಮಹಾಕೂಟ ಮತ್ತು ಬನಶಂಕರಿ ಮತ್ತು ಇತ್ತೀಚೆಗೆ ಉದಯ ಹೊಂದಿ, ಶಿವಯೋಗ ಸಾಧನೆಗೆ ಪ್ರಸಿದ್ಧ ಕೇಂದ್ರವಾದ ಶಿವಯೋಗಮಂದಿರ ಇವೆಲ್ಲವುಗಳು ಸಮೀಪದಲ್ಲಿಯೇ ಇದ್ದು ಪ್ರವಾಸಿಕರು ನೋಡತಕ್ಕ ಸ್ಥಾನಗಳಾಗಿರುವದರಿಂದ ಇವೆಲ್ಲವುಗಳ ವಿಷಯವನ್ನು ಈ ಗ್ರಂಥದಲ್ಲಿ ಒಂದೇ ಕಡೆಗೆ ಕೊಟ್ಟಿದೆ. ಈ ಪ್ರಕಾರ ಈ ಊರುಗಳ ಅವ-ಶೇಷಗಳನ್ನು ಕನ್ನಡದಲ್ಲಿ ಪರಿಚಯ ಮಾಡಿಕೊಡುತ್ತಿರುವ ಗ್ರಂಥ ಇದೇ ಎಲ್ಲಕ್ಕೂ ಮೊದಲನೆಯದು.

ಈ ಪುಸ್ತಕವನ್ನು ಹೆಚ್ಚು ಆಕರ್ಷಕವಾಗುವಂತೆ ಮಾಡಲು ನಮ್ಮ ಬೇಡಿ-ಕೆಗೆ ಮನ್ನಣೆಕೊಟ್ಟು ತಮ್ಮ ಸಂಸ್ಥೆಯ ಕೆಲವು ಛಾಯಾಚಿತ್ರಗಳನ್ನು ಪ್ರಕಟಿ-ಸಲು ಅನುಮತಿಯನ್ನಿತ್ತ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಡಾಯರೆಕ್ಟರರಾದ ಡಾ. ಬಿ. ಎ. ಸಾಲೆತ್ತೂರ ಎಂ. ಎ., ಪಿ ಎಚ್. ಡಿ.

( ಲಂಡನ್ ), ಡಿ. ಫಿಲ್. ( ಗಿಸನ್ ) ಅವರಿಗೆ ಬಹು ಋಣಿಯಾಗಿದ್ದೇವೆ. ಛಾಯಾಚಿತ್ರಗಳನ್ನು ಇದೇ ಸಂಸ್ಥೆಯಲ್ಲಿರುವ ಶ್ರೀ. ಕೆ. ಎಸ್. ಉಪಾಧ್ಯೆ ಅವರು ತಗೆದಿದ್ದಾರೆ. ಶ್ರೀ. ಕೃಷ್ಣಶರ್ಮ ಬೆಟಗೇರಿ ಅವರು ಈ ಗ್ರಂಥದ ಕರಡನ್ನು ಆಮೂಲಾಗ್ರ ಕೇಳಿ ಕೆಲವು ಸೂಚನೆಗಳನ್ನು ಕೊಟ್ಟದ್ದಕ್ಕಾಗಿ ಅವರ ಮುತ್ತು ಶ್ರೀ. ವೀರಭದ್ರಪ್ಪ ಮಲ್ಲಾಬಾದಿ ಅವರು ಶಿವಯೋಗಮಂದಿರದ ಬಗೆಗೆ ಬೇಕಾದ ಮಾಹಿತಿ ಮಾಡಿಕೊಟ್ಟು ಹಾನಗಲ್ಲ ಶ್ರೀ. ಕುಮಾರಸ್ವಾಮಿಗಳವರ ಅಚ್ಚನ್ನು ಕೊಟ್ಟದ್ದಕ್ಕಾಗಿ ಅವರ ಉಪಕಾರವನ್ನು ಸ್ಮರಿಸುತ್ತೇವೆ. ಚಾಲುಕ್ಯ ಪ್ರಕಾಶನದ ಸಂಚಾಲಕರಾದ ಶ್ರೀ. ಚುಳಕಿ ಗೋವಿಂದರಾಯರು ಈ ಗ್ರಂಥವನ್ನು ಪ್ರಸಿದ್ಧಿಸಲು ಮುಂದೆ ಬಂದದ್ದಕ್ಕಾಗಿ ಅವರಿಗೆ ಋಣಿಯಾಗಿದ್ದೇವೆ.

ಕೊನೆಯದಾಗಿ ಈ ಕೈಪಿಡಿಗೆ ಡಾ. ಬಿ. ಎ. ಸಾಲೆತೊರ, ಪಿಎಚ್. ಡಿ. ( ಲಂಡನ್ ) ಮತ್ತು ಶ್ರೀ. ವ್ಹಿ. ಕೆ. ಗೋಕಾಕ, ಎಂ. ಎ. ( ಆಗ್ಸನ್ ) ಅವರು ತಮ್ಮ ಅಭಿಪ್ರಾಯ ಬರೆದುಕೊಟ್ಟದ್ದಕ್ಕಾಗಿ ಅವರ ಉಪಕಾರ ಸ್ಮರಿಸುತ್ತೇವೆ.

ಧಾರವಾಡ

೧೯-೧೨-೫೮

**ಎ. ಎಂ. ಅಣ್ಣಿಗೇರಿ**

# ವಿಷಯಸೂಚಿ

# ಅರ್ಪಣೆ

ನನ್ನ

ಮಾತಾಪಿತೃಗಳಿಗೆ

—ಅಮೃತ

# ಬಾದಾವಿ

ಇಂದು ಕೇವಲ ೬,೮೦೦ ಜನವಸತಿಯುಳ್ಳ ಬಾದಾವಿಯು ಕ್ರಿ.ಶ. ೬ ರಿಂದ ೮ ನೆಯ ಶತಮಾನದ ವರೆಗೆ ಪಶ್ಚಿಮ ಚಲುಕ್ಯರ ರಾಜಧಾನಿಯಾಗಿ ಮಹಾ-ನಗರವೆಂದು ಮೆರೆದುದು ನಮ್ಮಲ್ಲಿ ಅನೇಕರಿಗೆ ಗೊತ್ತಿರಲು ಸಾಕು. ಈ ಊರಲ್ಲಿ, ಆ ಅರಸರ ಕಾಲದಲ್ಲಿ, ಕಲ್ಲಿನಲ್ಲಿ ಕೊರೆದ ದೊಡ್ಡ ಶೈವ, ವೈಷ್ಣವ ಮತ್ತು ಜೈನ ಮತದ ಗುಹೆಗಳು, ಬಾದಾವಿ ಚಲುಕ್ಯ ಮತ್ತು ವಿಜಯನಗರ



**ಉತ್ತರದ ಕೋಟೆ, ಬಾದಾವಿ.**

ರಾಜರ ಕಾಲದ ಕೋಟೆ–ಕೊತ್ತಳಗಳು (ಚಿತ್ರ ನೋಡಿರಿ), ಸುಮಾರು ೬ ನೆಯ ಶತಮಾನದಲ್ಲಿ ಕಟ್ಟಲ್ಪಟ್ಟ ವಿಶಾಲ ಹೊಂಡವು, ಕಂದಕಗಳು, ಕಲ್ಲಿನಿಂದ ಕಟ್ಟಿದ ಪ್ರಾಚೀನ ಗುಡಿಗಳು, ಸುಂದರ ಮೂರ್ತಿಗಳು, ಆದಿಲಶಾಹಿ ಕಾಲದ

ಮಸೀದೆ ಮೊದಲಾದವುಗಳಿವೆ. ಇವೆಲ್ಲವುಗಳನ್ನು ನೋಡಿದರೆ ಬಾದಾವಿಯ ಉಜ್ವಲ ಗತವೈಭವವು ನೋಡುವವರ ಮನಸ್ಸಿನ ಮೇಲೆ ಅಚ್ಚೊತ್ತುತ್ತದೆ. ಬಾದಾವಿಯ ನಾಮಾಂಕಿತ ರಾಜರು, ಅವರು ಕಟ್ಟಿಸಿದ ದೇವಾಲಯ, ಕಟೆಯಿಸಿದ ಮೂರ್ತಿಗಳು, ಬರೆಯಿಸಿದ ಶಾಸನಗಳು, ಅನುಸರಿಸಿದ ಧಾರ್ಮಿಕ ಪಂಥ ಇತ್ಯಾದಿಗಳ ಬಗೆಗೆ ಒಂದು ಸ್ಥೂಲ ಪರಿಚಯವನ್ನು ಈ ಊರಲ್ಲಿ ದೊರೆಯುವ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅವಶೇಷಗಳ ಸಹಾಯದಿಂದ ಇಲ್ಲಿ ಮಾಡಿಕೊಡಲಾಗಿದೆ.

ಈಗ ಮೈಸೂರ ರಾಜ್ಯದ ವಿಜಾಪೂರ ಜಿಲ್ಲೆಯಲ್ಲಿದ್ದ ಬಾದಾವಿಯು ದಕ್ಷಿಣ ರೇಲ್ವೆಯ ಹುಬ್ಬಳ್ಳಿ–ಸೊಲ್ಲಾಪೂರ ಮಾರ್ಗದ ಮೇಲಿರುವ ಬಾದಾವಿ ಸ್ಟೇಶನ್‌ದಿಂದ ಆಗ್ನೇಯಕ್ಕೆ ೩ ಮೈಲಿನ ಮೇಲಿದೆ. ಅಲ್ಲಿಗೆ ಹೋಗಲು ಹುಬ್ಬಳ್ಳಿ, ವಿಜಾಪೂರ, ಬೆಳಗಾವಿ ಮುಂತಾದ ಊರುಗಳಿಂದ ಎಸ್. ಟಿ. ಬಸ್ಸುಗಳ ಸೌಕರ್ಯವಿರುತ್ತದೆ. ಆ ಊರಲ್ಲಿ ವಸತಿ ಮಾಡಲು ಡಿ. ಎಲ್. ಬಿ. ಧರ್ಮಶಾಲೆ, ಪಿ. ಡಬ್ಲೂ. ಡಿ. ಇನ್ಸ್ಪೆಕ್ಶನ್ ಬಂಗಲೆ, ರೇಲ್ವೆ ಸ್ಟೇಶನ್‌ದ




ಹತ್ತರ ಆಡಗಲ್ ಮುಸಾಫಿರ್. ಬಂಗಲೆ, ಈ ಪ್ರಕಾರ ತಂಗುಮನೆಗಳಿವೆ. ಇವುಗಳನ್ನು ಅನುಕ್ರಮವಾಗಿ ಬಾದಾವಿಯ ತಹಸಿಲದಾರ, ವಿಜಾಪೂರದ

ಎಗ್ಝಿಕ್ಯೂಟಿವ್ಹ್ ಎಂಜನೀಯರ ಮತ್ತು ಡೆಪ್ಯೂಟಿ ಕಮಿಶನರ ಅವರಿಗೆ ಮೊದಲು ಬರೆದು ರಿಝರ್ವಮಾಡಿಸಿಕೊಳ್ಳಬಹುದು. ಬಾದಾಮಿಯ ರೇಲ್ವೆ ಸ್ಟೇಶನ್‌ದಿಂದ ಬಾದಾಮಿಯ ಊರಿಗೆ ಹೋಗಲು ಟಾಂಗಾ ಮತ್ತು ಎಸ್.ಟಿ. ಬಸ್ಸುಗಳ ಸೌಕರ್ಯವಿದೆ. ಬಾದಾಮಿಯಲ್ಲಿ ಕೆಲವು ಖಾನಾವಳಿಗಳಿವೆ. ಅಲ್ಲಿಂದ ಬನಶಂಕರಿ, ಮಹಾಕೂಟ, ಶಿವಯೋಗಮಂದಿರ, ಪಟ್ಟದಕಲ್ಲು ಮೊದಲಾದ ಊರುಗಳಿಗೆ ಹೋಗಲು ಬರುತ್ತದೆ. ಈ ಊರಲ್ಲಿ ಸಾಮಾನ್ಯ ತರಗತಿಯ ಪೇಟಿಯಿದ್ದು ಅಲ್ಲಿ ಕಿರಾಣಿ, ಸ್ಟೇಶನರಿ, ಅರಿವೆ ಮೊದಲಾದ ಅಂಗಡಿಗಳಿವೆ. ತಹಸಿಲದಾರರ ಕಚೇರಿ, ಪೋಸ್ಟ ಆಫೀಸು, ಪುಲಿಕೇಶಿ ವಾಚ-ನಾಲಯ, ಬ್ಯಾಂಕು ಇತ್ಯಾದಿ ಸಂಘ ಸಂಸ್ಥೆಗಳು ಈ ಊರಲ್ಲಿವೆ. ಇಲ್ಲಿ ಕೇಂದ್ರ ಸರಕಾರದ ಆರ್ಕಿಯಾಲಜಿ ಖಾತೆಯ ಒಬ್ಬ ಓವ್ಹರ್ಸಿಯರ ಮತ್ತು ಮೂವರು ಚೌಕೀದಾರರಿದ್ದಾರೆ. ಅವರು ಈ ಊರಿನ ಬಗೆಗೆ ಮಾಹಿತಿ ಮಾಡಿಕೊಡು-ತ್ತಾರೆ. ಆದರೆ ಇಲ್ಲಿ ಅಧಿಕೃತವಾಗಿ ನೇಮಿಸಲ್ಪಟ್ಟ ಮಾರ್ಗದರ್ಶಕರಿಲ್ಲ.

ಬಾದಾಮಿಯ ಊರಿನ ರಚನೆಯನ್ನು ಗಮನಿಸಬಹುದು. ಅದರ ಉತ್ತರ, ಪೂರ್ವ ಮತ್ತು ದಕ್ಷಿಣ ಭಾಗಗಳಲ್ಲಿ ಗುಡ್ಡವಿರುತ್ತದೆ. ಈ ಗುಡ್ಡದ ಕೆಳಗೆ ವಿಸ್ತಾರವಾದ ಒಂದು ಹೊಂಡವಿರುವದು. ಇದು ಪ್ರಾಚೀನಕಾಲದಲ್ಲಿ ರಾಜರ ಜಲಕ್ರೀಡಾಸ್ಥಾನವೂ ಆಗಿತ್ತು. ಇಲ್ಲಿಯ ಎಲ್ಲ ಪ್ರಾಚೀನ ಗುಡಿಗಳು ಈ ಹೊಂಡದ ಹತ್ತರ ಇವೆ. ಅವುಗಳಲ್ಲಿ ಪ್ರಮುಖವಾದವು ಗುಹೆಗಳು. ಗುಹೆಗಳಿಂದಲೆ ಪ್ರಾರಂಭಮಾಡಿ ಈ ಊರ ಅವಶೇಷಗಳ ಪರಿಚಯ ಮಾಡಿ ಕೊಡಲಾಗುವದು. ಅದಕ್ಕೂ ಮೊದಲು ಬಾದಾಮಿಯ ಚರಿತ್ರೆ, ಪೌರಾಣಿಕ ಅಂಶಗಳನ್ನು ಮತ್ತು ಅಲ್ಲಿ ಆಳಿದ ರಾಜರ ಪರಿಚಯವನ್ನು ಮಾಡಿಕೊಡು-ವೆವು. ಈ ಹಿನ್ನೆಲೆಯಿಂದ ಅವಶೇಷಗಳ ಸಮಂಜಸ ಕಲ್ಪನೆಯುಂಟಾಗಿ ರಸಾಸ್ವಾದಕ್ಕೆ ಅನುಕೂಲವಾಗುವದು.

## ಬಾದಾಮಿಯ ಊರು

ಬಾದಾಮಿಯ ಎಲ್ಲಕ್ಕೂ ಮೊದಲನೆಯ ಉಲ್ಲೇಖ ಈ ದೇಶದಲ್ಲಿ ಪ್ರವಾಸ ಮಾಡಿದ **ಟೋಲೆಮಿ**ಯ ( ಕ್ರಿ. ಶ. ೧೩೦ ) ವರದಿಯಿಂದ ಗೊತ್ತಾಗುವದು. ಈ ಊರ ಹೆಸರು ಬದಮೊಯಿ ಎಂದು ಆ ವರದಿಯಲ್ಲಿ ಬಂದಿದೆ. ಬಾದಾ-ಮಿಯ ಮೂಲ ಹೆಸರು ಬಾದಾಮಿಯೆಂದಿದೆ. ಅದನ್ನೇ ಸಂಸ್ಕೃತಕ್ಕೆ

ರೂಪಾಂತರಿಸಿ ವಾತಾಪಿ ಎಂದು ಮಾಡಿದ್ದು ಆ ಊರ ಪ್ರಾಚೀನ ಶಾಸನಗಳಿಂದ ಗೊತ್ತಾಗುತ್ತದೆ. ಕ್ರಿ. ಶ. ೧೩ ನೆಯ ಶತಮಾನದಲ್ಲಿ ಸೂಕ್ತಿಸುಧಾರ್ಣವ ಎಂಬ ಗ್ರಂಥವನ್ನು ರಚಿಸಿದ ಮಲ್ಲಿಕಾರ್ಜುನ ಕವಿ ತನ್ನ ಗ್ರಂಥದಲ್ಲಿ ಈ ಊರಿಗೆ ಬಾದಾಮಿಯೆಂದೇ ಸಂಬೋಧಿಸಿದ್ದಾನೆ. ಅದೇ ಹೆಸರು ೭,೮ ನೆಯ ಶತಮಾನಗಳ ಶಾಸನಗಳಲ್ಲಿಯೂ ಬರುವದು.

ಬಾದಾಮಿಯ ಬಗೆಗೆ ಒಂದು ಆಖ್ಯಾಯಿಕೆಯಿದೆ. ಅದು ಹೀಗಿದೆ: **ವಾತಾಪಿ, ಇಲ್ವಲ**ರೆಂಬ ಇಬ್ಬರು ದೈತ್ಯರು ಅಣ್ಣತಮ್ಮಂದಿರಾಗಿದ್ದರು. ಇಲ್ವಲನು ಬಂದ ಅತಿಥಿಗಳಿಗೆ ವಾತಾಪಿಯನ್ನು ಕೊಂದು ಉಣಿಸುತ್ತಿದ್ದನು ಮತ್ತು 'ವಾತಾಪಿ ಹೊರಗೆ ಬಾ' ಎಂದು ಕರೆಯುತ್ತಿದ್ದನು. ಈ ಶಬ್ದಗಳನ್ನು ಕೇಳಿ ವಾತಾಪಿಯು ಉಂಡವನ ಹೊಟ್ಟೆಯನ್ನು ಬಗೆದು ಹೊರಗೆ ಬರುತ್ತಿದ್ದನು. ಇದರಿಂದ ಅವನನ್ನು ಉಂಡವರ ಸಂಹಾರವಾಗುತ್ತಿತ್ತು. ಒಮ್ಮೆ **ಅಗಸ್ತ್ಯ**ರು ಈ ಭಾಗಕ್ಕೆ ಬಂದಾಗ್ಗ ಈ ಅಣ್ಣತಮ್ಮಂದಿರು ತಮ್ಮ ಮೋಸದ ಕಾರ್ಯವನ್ನು ಅಗಸ್ತ್ಯರ ಮೇಲೆಯೂ ಪ್ರಯೋಗಮಾಡಿದರಂತೆ. ಅಗಸ್ತ್ಯ ಋಷಿಗಳು ವಾತಾಪಿಯನ್ನು ಉಂಡು ತೇಗಿ 'ವಾತಾಪಿ ಜೀರ್ಣೋಭವ' (ವಾತಾಪಿ ಜೀರ್ಣವಾಗು) ಎಂದರಂತೆ. ಆಗ ಮಾತ್ರ ವಾತಾಪಿಯು ಹೊರಗೆ ಬರದೆ ಜೀರ್ಣವಾಗಿ ಹೋದನಂತೆ. ಈ ವಾತಾಪಿ ಇಲ್ವಲರೆ ಬಾದಾಮಿ ಮತ್ತು ಐಹೊಳೆಯ ಗುಡ್ಡಗಳಾಗಿ ಬಿದ್ದಿದ್ದಾರೆಂದು ನಂಬಿಕೆಯಿದೆ.

ಬಾದಾಮಿಯು ೭,೮ ನೆಯ ಶತಮಾನಗಳಲ್ಲಿ ಒಂದು ದೊಡ್ಡ ಪಟ್ಟಣವೂ ೧೪ ವಿದ್ಯೆಗಳಲ್ಲಿ ಪಾರಾಂಗತರಾದ ಸಾವಿರಾರು ಬ್ರಾಹ್ಮಣರಿಂದ ಕೂಡಿದ ಧಾರ್ಮಿಕ ಕೇಂದ್ರ (ಅಧಿಷ್ಠಾನ) ವೂ ಆಗಿತ್ತೆಂದು ಈ ಊರ ಶಾಸನದಿಂದ ತಿಳಿದು ಬರುತ್ತದೆ.

## ಪಶ್ಚಿಮ ಚಲುಕ್ಯರು

ಬಾದಾಮಿಯಲ್ಲಿ ಆಳಿದ ಚಲುಕ್ಯ ಅಥವಾ ಚಲಿಕ್ಯ ರಾಜಮನೆತನಕ್ಕೆ ಪಶ್ಚಿಮ ಅಥವಾ ಬಾದಾಮಿ ಚಲಿಕ್ಯ ರಾಜಮನೆತನವೆಂಬ ಹೆಸರಿದೆ. ಈ ಮನೆತನದವರು ಕ್ರಿ. ಶ. ೬ ನೆಯ ಶತಮಾನದಲ್ಲಿ ಬಾದಾಮಿಯ ಭಾಗವನ್ನು ಕದಂಬರಿಂದ ಗೆದ್ದುಕೊಂಡು ರಾಜ್ಯವಾಳಹತ್ತಿದರು. ಇವರ ರಾಜ್ಯ ಕ್ರಿ. ಶ. ೮ ನೆಯ ಶತಮಾನದ ವರೆಗೂ ಅಂದರೆ ಎರಡುನೂರು ವರ್ಷಗಳ

ವರೆಗೆ ನಡೆಯಿತು. ಈ ಚಲುಕ್ಯ ಮನೆತನದಲ್ಲಿ **೧ ನೆಯ ಪುಲಿಕೇಶಿ,** ೧ ನೆಯ ಕೀರ್ತಿವರ್ಮ, **ಮಂಗಲೇಶ, ೨ ನೆಯ ಪುಲಿಕೇಶಿ,** ಇಮ್ಮಡಿ ವಿಕ್ರಮಾದಿತ್ಯ ಮೊದಲಾದವರು ಪ್ರಮುಖರು. ಅವರು ತಮ್ಮ ಪರಾಕ್ರಮ-ದಿಂದ ದಕ್ಷಿಣ ಭಾರತದಲ್ಲಿ ಬಲಿಷ್ಠ ರಾಜರಾದ ಕದಂಬ, ಪಲ್ಲವ, ಗಂಗರನ್ನು ಸೋಲಿಸಿ ತಮ್ಮ ವಿಜಯಧ್ವಜವನ್ನು ಮೆರೆಯಿಸಿದ್ದಾರೆ. ಈ ರಾಜಮನೆತನ-ದವರು ವೈಷ್ಣವ ಮತಾವಲಂಬಿಗಳಾಗಿದ್ದರು. ಇವರು ಸಪ್ತಮಾತೃಗಳಿಂದ ಬೆಳೆಸಲ್ಪಟ್ಟವರೆಂದೂ, ಕಾರ್ತಿಕೇಯನ ಕೃಪೆಗೆ ಪಾತ್ರರಾಗಿ ಸಂಪತ್ತನ್ನು ಗಳಿಸಿದವರೆಂದೂ ಮತ್ತು ವೈರಿಗಳು ಇವರ ಲಾಂಛನವನ್ನು ನೋಡಿದ ಕೂಡಲೆ ಶರಣಾಗತರಾಗುವಂಥ ವರಾಹ ಲಾಂಛನವನ್ನು ಭಗವನ್ನಾರಾ-ಯಣನ ಅನುಗ್ರಹದಿಂದ ಪಡೆದವರೆಂದೂ ಅವರ ಶಾಸನಗಳಲ್ಲಿ ಉಕ್ತವಾಗಿದೆ. ಇವರಿಗೆ ಶೈವ, ವೈಷ್ಣವ, ಜೈನ ಮತ್ತು ಬೌದ್ಧ ಮತಗಳ ಸಲುವಾಗಿ ಸಾಕಷ್ಟು ಆದರವಿತ್ತೆಂಬುದು ಅವರ ಕಾಲಕ್ಕೆ ರಚಿತವಾದ ಗುಹೆಗಳಲ್ಲಿಯ ಮೂರ್ತಿಗಳಿಂದ ವಿದಿತವಾಗುವದು. ಉತ್ತರ ಭಾರತದಲ್ಲಿ ಗುಪ್ತರಕಾಲಕ್ಕೆ ವೈದಿಕ ಸಂಸ್ಕೃತಿಯು ಪುನರುಜ್ಜೀವನ ಹೊಂದಿದಂತೆ ದಕ್ಷಿಣದಲ್ಲಿಯೂ ಅದು ಚಲುಕ್ಯರ ಕಾಲದಲ್ಲಿ ಬೌದ್ಧ, ಜೈನ ಮತಗಳ ಪ್ರಭಾವವನ್ನು ಹಿಂದೂಡಿ ಪ್ರತಿಭೆಯಿಂದ ಮೆರೆಯಿತು. ಈ ಚಲುಕ್ಯ ರಾಜರು ಕಲ್ಲಿನಲ್ಲಿ ಅದ್ಭುತ ಗುಹೆಗಳನ್ನು ಕೊರೆಯಿಸಿ,ಗುಡಿಕೋಟೆಗಳನ್ನು ಕಟ್ಟಿಸಿ ಕರ್ನಾಟಕದ ವಾಸ್ತು-ಶಿಲ್ಪ, ಮೂರ್ತಿಶಿಲ್ಪ ಮತ್ತು ವರ್ಣಕಲೆಗೆ ತಮ್ಮ ಅಮೋಘವಾದ ಕಾಣಿಕೆ-ಯನ್ನು ಸಲ್ಲಿಸಿದ್ದಾರೆ. ಒಂದೇ ಮಾತಿನಲ್ಲಿ ಹೇಳುವದಾದರೆ ಈ ಬಾದಾವಿ ಚಲುಕ್ಯ ಮನೆತನದ ಕಾಲವೆಂದರೆ ಡೆಕ್ಕನ್ ಮತ್ತು ಕರ್ನಾಟಕದಲ್ಲಿ ವೈದಿಕ ಮತದ ಉಚ್ಛ್ರಾಯ ಕಾಲವೆಂದು ನಿಸ್ಸಂದೇಹವಾಗಿ ಹೇಳಬಹುದು. ಈ ಚಲುಕ್ಯ ಮನೆತನವು ಜಯಸಿಂಹನಿಂದ ಪ್ರಾರಂಭವಾಯಿತು. ಇವನ ಮೊಮ್ಮಗನೆ ೧ ನೆಯ ಪುಲಿಕೇಶಿ. ಇವನು ಬಾದಾವಿಯಲ್ಲಿ ಒಂದು ಭದ್ರವಾದ ಕೋಟೆಯನ್ನು ಕಟ್ಟಿಸಿದನು. ( ಶಾಸನಗಳು ಎಂಬ ವಿಭಾಗ ನೋಡಿರಿ )-ಅಶ್ವಮೇಧ ಯಜ್ಞವನ್ನು ಮಾಡಿದ್ದಾನೆ. ಇವರ ಮಗನಾದ ೧ ನೆಯ ಕೀರ್ತಿ-ವರ್ಮನು ಬಹು ಪರಾಕ್ರಮಶಾಲಿ. ಇವನು ಅನೇಕ ರಾಜರನ್ನು ಸೋಲಿ-ಸಿದನು. ಇವನೂ ಸಹ ತನ್ನ ತಂದೆಯಂತೆ ಕೆಲವು ಯಜ್ಞ-ಯಾಗಾದಿ ಗಳನ್ನು ಮಾಡಿದನು. ಇವನ ತಮ್ಮ ಮಂಗಲೇಶ. ಇವನು ತನ್ನ ಅಣ್ಣನ

ಕಾಲದಲ್ಲಿ ಬಾದಾವಿಯ ಭವ್ಯವಾದ ವಿಷ್ಣು ಗುಹೆಯನ್ನು ಪೂರ್ಣಗೊಳಿಸಿದನು. ಇವನು ೧೮ ಯುದ್ಧಗಳಲ್ಲಿ ಜಯ ಸಂಪಾದಿಸಿದನು. ಇವನ ಮಹಾಕೂಟದ ಶಾಸನವು ಸುಪ್ರಸಿದ್ಧವಾಗಿದೆ. ಮಂಗಲೇಶನ ತರುವಾಯ **೨ ನೆಯ ಪುಲಿಕೇಶಿ**ಯು ಪಟ್ಟವೇರಿದನು. ಇವನ ಕಾಲಕ್ಕೆ ಬಾದಾವಿಯ ವಿಜಯ ದುಂದುಭಿಯು ಪೂರ್ವಕ್ಕೆ ಓಡಿಸಾದ ವರೆಗೆ, ದಕ್ಷಿಣಕ್ಕೆ ಪಲ್ಲವ ರಾಜ್ಯವನ್ನು ಭೇದಿಸಿ ಬಹು ದೂರದ ವರೆಗೂ ಮತ್ತು ಉತ್ತರಕ್ಕೆ ನರ್ಮದಾ ನದಿಯ ಮೇಲೆ ಬಹು ದೂರದ ವರೆಗೂ ಮೊಳಗಿತ್ತು. ಮುಂಬಯಿಯ ಹತ್ತರವಿದ್ದ ಘಾರಾಪುರಿ ( ಈಗಿನ ಎಲಫಂಟಾ ) ಅಥವಾ ಜಂಜೀರಾದ ಸಮೀಪದಲ್ಲಿದ್ದ ರಾಜಪುರಿ ಇವನ ರಾಜ್ಯದಲ್ಲಿಯೆ ಇತ್ತು. ಈ ಪುಲಿಕೇಶಿಯು ತನ್ನ ಉತ್ತರದ ದಂಡಯಾತ್ರೆಯಲ್ಲಿ ಸಮಗ್ರ ಉತ್ತರಾಪಥಕ್ಕೆ ಒಡೆಯನಾದ ಕನೋಜದ **ಹರ್ಷವರ್ಧನ**ನನ್ನು ಸೋಲಿಸಿ ಪರಮೇಶ್ವರ ಎಂಬ ಬಿರುದನ್ನು ಧರಿಸಿದನು. ತನ್ನ ತಮ್ಮನಾದ ಕುಬ್ಜವಿಷ್ಣುವರ್ಧನನನ್ನು ವೆಂಗಿ ಮಂಡಳದ ಅಧಿಕಾರಿಯನ್ನಾಗಿ ಮಾಡಿದನು. ಇರಾಣದ ಅರಸನಾದ ಖುಸ್ರುವಿನ ರಾಯಭಾರಿಯು ಪುಲಿಕೇಶಿಯ ಕಡೆಗೆ ಬಂದಿದ್ದನು. ಈ ಸಾಮ್ರಾಟನ ರಾಜ್ಯದಲ್ಲಿ ಪ್ರವಾಸ ಮಾಡಿದ **ಹುಯೆನ್ ತ್ಸ್ಯಾಂಗನು** ಇವನ ರಾಜ್ಯದ ಬಗೆಗೆ ಮತ್ತು ಅಲ್ಲಿಯ ಜನರ ವಿಷಯವಾಗಿ ಉತ್ತಮ ಅಭಿಪ್ರಾಯಪಟ್ಟಿದ್ದಾನೆ. ಈ ೨ ನೆಯ ಪುಲಿಕೇಶಿಯ ಆಳಿಕೆಯ ಕೊನೆಗೆ ಚಲುಕ್ಯರ ಬಲ ಕುಂದಿತು. ಪಲ್ಲವ ನರಸಿಂಹವರ್ಮನು ಚಲುಕ್ಯರ ರಾಜಧಾನಿಯಾದ ಬಾದಾವಿಯನ್ನು ಕೈವಶಮಾಡಿಕೊಂಡು 'ವಾತಾಪಿಕೊಂಡ' ಎಂಬ ಬಿರುದನ್ನು ಧರಿಸಿದ್ದನು. ಬಾದಾವಿಯು ಕೆಲವು ಕಾಲ ಪಲ್ಲವರ ಅಂಕಿತದಲ್ಲಿತ್ತು. ಮುಂದೆ ಪುಲಿಕೇಶಿಯ ಮಗನಾದ ೧ ನೆಯ ವಿಕ್ರಮಾದಿತ್ಯನು ಪಲ್ಲವರನ್ನು ಸೋಲಿಸಿ ತನ್ನ ರಾಜ್ಯವನ್ನು ವಿಸ್ತರಿಸಿದನು. ಇವನ ಕಾಲದಲ್ಲಿ ಉತ್ತರಾಪಥದ ರಾಜರನ್ನು ಸೋಲಿಸಿ ಅವರಿಂದ ಗಂಗಾ, ಯಮುನಾ ಪಾಳಿಧ್ವಜ ಮೊದಲಾದವುಗಳನ್ನು ದೊರಕಿಸಲಾಯಿತು. ಇವನ ತರುವಾಯ ಪಟ್ಟವೇರಿದ ವಿನಯಾದಿತ್ಯ, ವಿಜಯಾದಿತ್ಯ, ೨ ನೆಯ ವಿಕ್ರಮಾದಿತ್ಯರು ಬಲಿಷ್ಠ ರಾಜರಾಗಿದ್ದರು. ಈ ೨ ನೆಯ ವಿಕ್ರಮಾದಿತ್ಯನ ಮಗನಾದ ಇಮ್ಮಡಿ ಕೀರ್ತಿವರ್ಮನ ಕಾಲಕ್ಕೆ ( ಕಿ. ಶ. ೭೪೪–೪೫–೭೫೭ ) ಬಾದಾವಿಯು ರಾಷ್ಟ್ರಕೂಟರ ವಶವಾಯಿತು. ಅವರ ತರುವಾಯ ಅದು ಕಲ್ಯಾಣದ ಚಾಲುಕ್ಯ, ಕಲಚುರ್ಯ, ದೇವಗಿರಿ ಯಾದವ, ವಿಜಯನಗರ,

ಆದಿಲಶಾಹಿ, ಮರಾಠಾ ಇತ್ಯಾದಿ ರಾಜಮನೆತನಗಳ ಆಧಿಪತ್ಯಕ್ಕೆ ಒಳಗಾಗಿತ್ತು.
ಬಾದಾವಿಯ ಮಹತ್ವದ ಅವಶೇಷಗಳನ್ನು ಮುಂದೆ ಹೇಳಿದೆ.

## ೧. ಗುಡಿಗಳು

## ೧ ನೆಯ ಗುಹೆ (ಶೈವ ಗುಹೆ)



**೧ ನೆಯ ಗುಹೆ, ಬಾದಾವಿ**

ಈ ಗುಹೆಯನ್ನು (ಚಿತ್ರ ನೋಡಿರಿ) ದಕ್ಷಿಣ ದಿಕ್ಕಿನ ಗುಡ್ಡದಲ್ಲಿ ಕೊರೆದಿದೆ. ಇದು ಉತ್ತರಕ್ಕೆ ಮುಖ ಮಾಡಿದೆ. ೩೦–೩೫ ಮೆಟ್ಟಲುಗಳನ್ನು ಹತ್ತಿ ಈ ಗುಹೆಗೆ ಹೋಗಬೇಕಾಗುವದು. ಅದರ ಹೊರಮಗ್ಗಲು ಎಡಭಾಗದಲ್ಲಿ ಹದಿನೆಂಟು ಕೈಗಳುಳ್ಳ **ನಟರಾಜನ** ಸುಂದರ ವಿಗ್ರಹವಿದೆ. (ಚಿತ್ರ ನೋಡಿರಿ)

ನಟರಾಜನು ತನ್ನ ಕೈಗಳಲ್ಲಿ ಹಾವು, ಡಮರು, ತಂತುವಾದ್ಯ, ತ್ರಿಶೂಲ, ಮುಂತಾದವುಗಳನ್ನು ಹಿಡಿದಿರುವನು. ಅವನ ಉಳಿದ ಕೈಗಳು ಕೆಲವು ಮುದ್ರೆಗಳಲ್ಲಿವೆ. ಇವನ ತಲೆಯ ಮೇಲೆ ಜಟಾ ಇರುವದು. ಇವನು ಕಮಲ-ಪೀಠದ ಮೇಲೆ ಬಲಗಾಲನ್ನಿಟ್ಟು ಎಡಗಾಲನ್ನೆತ್ತಿ ದ್ವಿಭಂಗಿಯಲ್ಲಿ ಕುಣಿಯುತ್ತಿ-ದ್ದಾನೆ. ನಟರಾಜನ .ಬಲಗಡೆಗೆ ನಂದಿ ಮತ್ತು ಎಡಗಡೆಗೆ ನರ್ತಿಸುವ



**ನಟರಾಜ, ಬಾದಾಮಿ**

ಗಣಪತಿ ಮತ್ತು ಮೃದಂಗವನ್ನು ನುಡಿಸುವವನು ಇದ್ದಾರೆ. ಈ ನಟರಾಜನ ಮೂರ್ತಿಯ ಒಂದು ಮಗ್ಗಲಿನ ಯಾವುದೇ ಒಂದು ಕೈಯನ್ನು ಮತ್ತೊಂದು ಮಗ್ಗಲಿನ ಯಾವುದೇ ಒಂದು ಕೈಯೊಡನೆ ಹೊಂದಿಸಿ ನೋಡಬಹುದು.

ಅಂಥ ಭಂಗಿಯನ್ನು ಇಲ್ಲಿ ತೋರಿಸಿದೆ. ಈ ವಿಗ್ರಹದ ಕೈಗಳ ರಚನೆ, ಮಾಟ ಶಾಸ್ತ್ರ ಸಮ್ಮತವಾಗಿದ್ದು ಇದೊಂದು ಅಪೂರ್ವ ಕಲಾಕೃತಿಯಾಗಿದೆ.

ನಟರಾಜನ ಬಲಗಡೆಗೆ ಇರುವ ಒಂದು ಸಣ್ಣ ಕೋಣೆಯಲ್ಲಿ, ಎದುರಿನ ಗೋಡೆಯ ಮೇಲೆ, ಉತ್ತಮವಾಗಿ ಕೆತ್ತಲ್ಪಟ್ಟ **ಮಹಿಷಾಸುರಮರ್ದಿನಿ** ಇರುವಳು. ಇವಳು ಕೋಣನ ರೂಪದಲ್ಲಿರುವ ಮಹಿಷಾಸುರನನ್ನು ಬಾಲದಿಂದ ಹಿಡಿದೆತ್ತಿ ತ್ರಿಶೂಲದಿಂದ ಆ ದೈತ್ಯನನ್ನು ತಿವಿದಿದ್ದಾಳೆ. ಅವಳ ಮೇಲಿನ ಕೈಗಳಲ್ಲಿ ಶಂಖ, ಚಕ್ರಗಳಿವೆ. ತಲೆಯ ಮೇಲೆ ಕಿರೀಟವಿರುವದು. ಇವಳು ಸೀರೆಯನ್ನುಟ್ಟು, ಕೈಗಳಲ್ಲಿ ಬಹಳ ಬಳೆಗಳನ್ನಿಟ್ಟುಕೊಂಡು ತ್ರಿಭಂಗಿಯಲ್ಲಿ ನಿಂತಿದ್ದಾಳೆ. ಮೇಲೆ ಗಂಧರ್ವದಂಪತಿಗಳು ಮಾಲೆಯನ್ನು ಹಿಡಿದುಕೊಂಡು ಇವಳಿಗೆ ಹಾಕಲು ಆಕಾಶದಲ್ಲಿ ಇವಳ ಕಡೆಗೆ ಧಾವಿಸುತ್ತಿದ್ದಾರೆ. ಈ ಮಹಿಷಾಸುರಮರ್ದಿನಿಯ ಎಡಕ್ಕೆ ಮತ್ತೊಂದು ಗೋಡೆಯ ಮೇಲೆ **ಗಣಪತಿ**ಯು ಇರುವನು. ಇವನು ಬಲಗೈಯಲ್ಲಿ ಕೋರೆಯನ್ನು ಮತ್ತು ಎಡಗೈಯಲ್ಲಿ ಮೋದಕದ ಒಂದು ಪಾತ್ರೆಯನ್ನು ಹಿಡಿದಿದ್ದಾನೆ. ಇವನ ಎದುರಿನ ಗೋಡೆಯ ಮೇಲೆ **ಷಣ್ಮುಖ**ನು ನವಿಲ ಮೇಲೆ ಕಡಿವಾಣವನ್ನು ಹಿಡಿದುಕೊಂಡು ಕುಳಿತಿರುವನು. ಇವನು ಕುಳಿತ ಠೀವಿ ಗಂಭೀರವಾಗಿದೆ. ಈ ಮೂರು ವಿಗ್ರಹಗಳ ಕೆಳಗೆ ಗಣಗಳು ನಾನಾ ಭಂಗಿಗಳಲ್ಲಿ ಕುಣಿಯುತ್ತಿವೆ. ಷಣ್ಮುಖನ ಕೆಳಗೆ ಎರಡು ಗಣಗಳ ಸಹಾಯದಿಂದ ನಾಲ್ಕು ಗಣಗಳಾಗುವಂತೆ ಮಾಡಿ ತೋರಿಸಿದ ಜಾಣ್ಮೆ ನೋಡುವಂತಹದಿದೆ. ಇಲ್ಲಿದ್ದ ಗಣಗಳಲ್ಲಿ ಕೆಲವು ಕುಸ್ತಿ ಆಡುವ, ಒಂದರ ಹೊಟ್ಟೆಯಲ್ಲಿ ಮನುಷ್ಯನ ತಲೆ ಮೂಡಿದ, ಮತ್ತೊಂದು ಹಾವು ಹಿಡಿದುಕೊಂಡ, ಮಗದೊಂದು ಗಣ ಆನೆಯಂತಹ ಆಭರಣವನ್ನು ಕೊರಳಲ್ಲಿ ಹಾಕಿಕೊಂಡ, ಇತ್ಯಾದಿ ದೃಶ್ಯಗಳನ್ನು ನೋಡಬಹುದು.

ಇದೇ ಪಶ್ಚಿಮ ಗೋಡೆಯ ಗುಂಟ ಒಳಗೆ ಹೋದರೆ ಮೊಗಸಾಲೆಯಲ್ಲಿ ೭′ ೭″ ಎತ್ತರವಾದ **ಅರ್ಧನಾರೀಶ್ವರ**ನ ವಿಗ್ರಹವಿರುವದು. ಈ ದೇವರ ಬಲ ಭಾಗದಲ್ಲಿ ಜಟಾ, ಚಂದ್ರ, ತಲೆಬುರುಡೆ, ಮೂರನೆಯ ಕಣ್ಣು ಇತ್ಯಾದಿ ಶಿವನ ಚಿನ್ಹಗಳೂ ಎಡಭಾಗದಲ್ಲಿ ತುರುಬು, ಕಿವಿಯ ದುಂಡಾದ ಆಭರಣ, ಸೀರೆ, ಬಳೆ ಮೊದಲಾದ ಪಾರ್ವತಿಯ ಚಿನ್ಹಗಳೂ ಇರುತ್ತವೆ. ಅರ್ಧನಾರೀಶ್ವರನಿಗೆ ನಾಲ್ಕು ಕೈಗಳಿವೆ. ಮೇಲಿನ ಬಲಗೈಯಲ್ಲಿ ಖಟ್ವಾಂಗ ಮತ್ತು ಎಡ

ಗೈಯಲ್ಲಿ ಒಂದು ಕಮಲವಿದೆ. ಕೆಳಗಿನ ಕೈಗಳು ವೀಣೆಯನ್ನು ಹಿಡಿದಿವೆ. ಈ ಮೂರ್ತಿಯ ಬಲಕ್ಕೆ ಎಲುಬಿನ ಹಂದರದಂತಿದ್ದ ಭೃಂಗಿಯು ನಿಂತಿದ್ದಾನೆ. ನಂದಿಯೂ ಅಲ್ಲಿದೆ. ಎಡಗಡೆಗೆ ಒಬ್ಬ ಸ್ತ್ರೀ ಕೈಯಲ್ಲಿ ಆಭರಣದ ಪೆಟ್ಟಿಗೆ-ಯನ್ನು ಹಿಡಿದುಕೊಂಡು ನಿಂತಿರುವಳು. ಇವಳು ಕೂದಲುಗಳನ್ನು ಕಟ್ಟಿಕೊಂಡ ರೀತಿ ಸುಂದರವಾಗಿದೆ. ಮೇಲೆ ಆಕಾಶದಲ್ಲಿ ಮೋಡಗಳ ನಡುವೆ ಗಂಧರ್ವದಂಪತಿಗಳು ಹಾರಾಡುತ್ತಿದ್ದಾರೆ.



**ನಾಗ, ಬಾದಾವಿ**

ಈ ಅರ್ಧನಾರೀಶ್ವರನ ವಿಗ್ರಹದ ಎದುರಿಗೆ ಪೂರ್ವಕ್ಕೆ **ಹರಿಹರನ** ಮೂರ್ತಿ ಇರುವದು. ಇದಕ್ಕೆ ನಾಲ್ಕು ಕೈಗಳಿವೆ. ಮೂರ್ತಿಯ ಬಲಭಾಗವು ಶಿವನದಿದ್ದು ಅಲ್ಲಿ ಜಟಾ, ತಲೆಬುರುಡೆ, ನಾಗಕುಂಡಲ, ಖಟ್ವಾಂಗ, ಚರ್ಮಾಂಬರ ಮೊದಲಾದವು ಇರುತ್ತವೆ. ಎಡಭಾಗದಲ್ಲಿ ಹರಿಯ ಗುರುತು-ಗಳಿವೆ. ಮೂರ್ತಿಯ ಬಲಭಾಗಕ್ಕೆ ನಂದಿಯು ಲಂಗೋಟಿ ಹಾಕಿಕೊಂಡು ಕೈಯಲ್ಲಿ ತ್ರಿಶೂಲ ಹಿಡಿದು ನಿಂತಿರುವನು. ನಂದಿಯ ಬಲಗಡೆಗೆ ಪಾರ್ವ-

ತಿಯು ಕಮಲವನ್ನು ಹಿಡಿದು ನಿಂತಿದ್ದಾಳೆ. ಹರಿಹರನ ಮೂರ್ತಿಯ ಎಡಕ್ಕೆ ಗರುಡನು ಕೈಕಟ್ಟಿಕೊಂಡು ನಿಂತಿರುವನು. ಇಲ್ಲಿ ಇವನ ಮುಖ ಮನುಷ್ಯನ ಮುಖದಂತಿದೆ. ಗರುಡನ ಎಡಕ್ಕೆ ಲಕ್ಷ್ಮಿಯು ತಲೆಯ ಮೇಲೆ ಕಿರೀಟಧರಿಸಿ ನಿಂತಿರುವಳು. ಇವಳ ಬಲಗೈಯಲ್ಲಿ ಕಮಲವಿದೆ. ಎಡಗೈ ಕೆಳಗೆ ಬಿಟ್ಟಿದೆ. ಮೇಲೆ, ವಾಡಿಕೆಯಂತೆ ಗಂಧರ್ವವಿಗ್ರಹಗಳಿವೆ. ಹರಿಹರನ ಮೂರ್ತಿಯ ಕೆಳಗೆ ಕುಬ್ಜ ಗಣಗಳು ಕೊಂಬು, ಕೊಳಲು ಮೊದಲಾದವುಗಳನ್ನು ಬಾರಿಸುತ್ತ ವಿವಿಧ ಭಂಗಿಗಳಲ್ಲಿ ಇರುತ್ತವೆ.

ಈ ಹರಿಹರನ ಬಲಕ್ಕೆ, ಗುಹೆಯ ಹೊರಮಗ್ಗಲಲ್ಲಿ, ತ್ರಿಶೂಲಧಾರಿಯಾದ ದ್ವಾರಪಾಲಕನು ನಿಂತಿದ್ದಾನೆ. ಇವನ ಮೇಲ್ಭಾಗದಲ್ಲಿ ನಂದಿಯ ಮೇಲೆ ಕುಳಿತ ಶಿವಪಾರ್ವತಿಯರ ಮತ್ತು ಕೆಳಗೆ ಗಜ-ವೃಷಭದ ಮೂರ್ತಿಗಳಿವೆ.

ಮೊಗಸಾಲೆಯ ಛತ್ತಿನ ಮಧ್ಯದಲ್ಲಿ ಐದು ಹೆಡೆಯುಳ್ಳ **ನಾಗ**ನ ಒಂದು ಉತ್ತಮ ಮೂರ್ತಿ ಇದೆ. (ಚಿತ್ರ ನೋಡಿರಿ) ಅದರ ಮೇಲ್ಭಾಗ ಮನುಷ್ಯನಂತೆ, ಕೆಳಭಾಗ ಹಾವಿನ ಆಕಾರದ್ದಿದೆ. ಈ ಮೂರ್ತಿಯ ಸುತ್ತಲು ಪಕ್ಷಿಗಳು, ಆನೆ ಮೊದಲಾದ ವಿಚಿತ್ರ ದೇಹದ ಪ್ರಾಣಿಗಳಿವೆ. ಇದೇ ಛತ್ತಿನಲ್ಲಿ ಹರಿಹರನ ಕಡೆಗೆಯಿದ್ದ ಭಾಗದಲ್ಲಿ ಗಂಧರ್ವ ದಾಂಪತ್ಯದ (ಚಿತ್ರ ನೋಡಿರಿ) ಒಂದು ಜೋಡು ಹಾರಾಡುತ್ತಿದೆ. ಗಂಡಸಿನ ಕೈಯಲ್ಲಿ ಖಡ್ಗವಿರುತ್ತದೆ. ಇವನ ಹೆಂಡತಿಯು ತಲೆಯ ಕೂದಲುಗಳನ್ನು ವಿಶಿಷ್ಟ ಪದ್ಧತಿಯಲ್ಲಿ ಕಟ್ಟಿಕೊಂಡಿದ್ದಾಳೆ. ಅದೇ ಪ್ರಕಾರ ಅರ್ಧನಾರೀಶ್ವರನ ಮೂರ್ತಿಯ ಕಡೆಗೂ ಛತ್ತಿನಲ್ಲಿ ಮತ್ತೊಂದು **ಗಂಧರ್ವ ದಾಂಪತ್ಯ**ದ ಜೊತೆ ಇದೆ. ಇಲ್ಲಿ ಗಂಧರ್ವನ ಹೆಂಡತಿ ತನ್ನ ತಲೆಯ ಮೇಲೆ ಹಾರಾಡುತ್ತಿರುವ ಒಂದು ವಸ್ತ್ರವನ್ನು ಹಿಡಿದಿರುವಳು. ಈ ಎರಡೂ ಗಂಧರ್ವ ಪಟ್ಟಿಕೆಗಳ ಹತ್ತರದ ಭಾಗಗಳಲ್ಲಿ ಒಂದೊಂದು ಕಮಲವಿದೆ.

ಈ ಗುಹೆಯ ಹೊರಮಗ್ಗಲಿನ ಕಟ್ಟೆಯ ಮೇಲೆ ಗಣಗಳ ಸಾಲು ಇದೆ. ವಿವಿಧ ರೀತಿಯಲ್ಲಿದ್ದ ಈ **ಗಣ**ಗಳು ನೋಡುವವನ ಮನಸ್ಸನ್ನು ಆಕರ್ಷಿಸುತ್ತವೆ. ಈ ಗುಹೆಯ ಮೊಗಸಾಲೆಗೆ **ಹೋ**ಗಲು ನಾಲ್ಕು ಕಂಬಗಳಿವೆ. ಅಲ್ಲಿಂದ ಮಂಟಪಕ್ಕೆ ತಲುಪಲು ಸುಂದರವಾಗಿ ಕೆತ್ತಿದ ಕಂಬಗಳು ಮತ್ತು ಎರಡು ಅರ್ಧಕಂಬಗಳು ಇರುವವು. **ಮಂಟಪ**ದಲ್ಲಿ ಚೌಕಾದ ೮ ಕಂಬ-

ಗಳಿವೆ. ಈ ಕಂಬಗಳ ಮೇಲ್ಗಡೆಗೆ ಕಮಲ, ಆನೆಯ ಮೇಲೇರಿದ ಸಿಂಹ, ಮಕರ, ಟಿಗರು ಮೊದಲಾದ ಆಕೃತಿಗಳಿವೆ. ಇವುಗಳ ಮೇಲೆ ಚನ್ನಾಗಿ ತಯಾರಿಸಿದ ಸುಳುವುಗಳೂ ಇರುವವು. ಕಂಬಗಳ ಬೋದಿನ ಮೇಲೆ ನರಸಿಂಹ, ಪ್ರೀತಿಸುವ ದಂಪತಿಗಳು ಇತ್ಯಾದಿ ಮೂರ್ತಿಗಳಿವೆ.

ಗುಹೆಯ ಮಧ್ಯದಲ್ಲಿ ಎದುರಿಗೆ ಗರ್ಭಗುಡಿ ಇರುವದು. ಅದರ ಪೀಠದ ಮೇಲೆ ಶಿವಲಿಂಗವಿದೆ. ಈ ಗರ್ಭಗುಡಿಯ ಬಾಗಿಲದ ಮೇಲ್ಗಡೆಗೆ ಶಂಖನಿಧಿ,



**ಗಂಧರ್ವ ದಂಪತಿಗಳು, ಬಾದಾಮಿ**

ಪದ್ಮನಿಧಿಗಳಿರುವರು. ಪ್ರತ್ಯೇಕವಾಗಿ ಕಲ್ಲಿನಲ್ಲಿ ತಯಾರಿಸಿದ ನಂದಿಯ ಮೂರ್ತಿಯನ್ನು ಗರ್ಭಗುಡಿಯ ಮುಂದೆ ಇಟ್ಟಿದೆ.

ಈ ಗುಹೆಯ ಮುಂಜೂರಿನ ಮೇಲೆ ೬-೭ ನೆಯ ಶತಮಾನದ ಕೆಲವು ಶಾಸನಗಳಿವೆ. ಈ ಗುಹೆಯ ಕಾಲ ಕ್ರಿ. ಶ. ೬ ನೆಯ ಶತಮಾನ. ಇದು




೪೭′ ಉ... ದ್ದ ಮೂರ್ತಿಗಳನ್ನು ಕಲ್ಲಿನಲ್ಲಿಯೆ ಕಟೆದು ಮುಂದೆ ಎದ್ದು ಬರುವಂತೆ ನಿರ್ಮಿಸಿದ್ದಾರೆ. ಹೀಗೆ ಮಾಡಿರುವುದರಿಂದ ಸ್ವತಃ ಮೂರ್ತಿಗಳು ನಿಂತಿರುವವೊ ಎಂಬಂತೆ ಭಾಸವಾಗುತ್ತದೆ.



ಈ ಗುಹೆಯ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳು ಅದನ್ನು ತಯಾರಿಸಿದ ವಾಸ್ತುಶಿಲ್ಪಶಾಸ್ತ್ರಜ್ಞರ ಮೇಲ್ಮೆಯನ್ನು ನಿದರ್ಶಿಸುತ್ತವೆ. ನಟರಾಜನು ನಿಂತ ಭಂಗಿ ಮತ್ತು ಅವನ ಹಾಸ್ಯಮುಖ, ಮಹಿಷಾಸುರಮರ್ದಿನಿಯ ರಭಸ, ಹರಿಹರನ ಗಾಂಭೀರ್ಯ ಇವುಗಳನ್ನು ಗಮನಿಸಬಹುದು.

ಈ ಗುಹೆಯು ಇಲ್ಲಿಯ ಎಲ್ಲ ಗುಹೆಗಳಲ್ಲಿ ಅತಿಪ್ರಾಚೀನವಾದುದು.

## ೨ ನೆಯ ಗುಹೆ (ವೈಷ್ಣವ ಗುಹೆ)

೧ ನೆಯ ಗುಹೆಯಿಂದ ೬೪ ಪಾವುಟಿಗೆಗಳನ್ನು ಹತ್ತಿ ಪೂರ್ವಕ್ಕೆ ಹೋದರೆ ೨ ನೆಯ ಗುಹೆಯು ಬರುವದು. ಇದೂ ಸಹ ಉತ್ತರಕ್ಕೆ ಮುಖ ಮಾಡಿದೆ. ಇದರ ಎದುರಿನ ಕಟ್ಟೆಯ ಮೇಲೆ **ಗಣ**ಗಳನ್ನು ಕೆತ್ತಿದೆ. ಈ ಗಣಗಳು ಕುಳ್ಳಾಗಿದ್ದು ಹಾಸ್ಯ ಹುಟ್ಟಿಸುವಂತಹ ರೀತಿಯಲ್ಲಿವೆ. ಅವುಗಳಲ್ಲಿ ಕೆಲವು ಒಡೆದು ಹೋಗಿವೆ. ತಲೆಗೂದಲುಗಳನ್ನು ಹರವಿಕೊಂಡು ಲಂಗೋಟಿಯನ್ನು ನೆಲದ ಮೇಲೆ ಅಲೆದಾಡಿಸುತ್ತ ಓಡಿಹೋಗುವ, ತನ್ನ ಬಲಗೈಯ ಮೇಲೆ ತಂಬಿಗೆ ಇಟ್ಟುಕೊಂಡು ನೃತ್ಯಮಾಡುವ, ಕೊಂಬು ಊದುವ, ಕೂದಲುಗಳನ್ನು ಮೇಲಕ್ಕೆ ಹರವಿಕೊಂಡು ಕುಣಿಯುವ, ನಾಲ್ಕು ಕೈಗಳುಳ್ಳ ಇತ್ಯಾದಿ ರೂಪದಲ್ಲಿರುವ ಕುಬ್ಜ ಮೂರ್ತಿಗಳು ಚನ್ನಾಗಿ ಇವೆ. ಮತ್ತು ಅವು ಜನರ ಮನಸ್ಸನ್ನು ಆಕರ್ಷಿಸುತ್ತವೆ.

ಈ ಕಟ್ಟೆಯ ಎರಡೂ ಬದಿಗೆ ದೊಡ್ಡ ಎರಡು ದ್ವಾರಪಾಲಕ ಮೂರ್ತಿಗಳಿವೆ. ಪೂರ್ವದಿಕ್ಕಿನ ಗೋಡೆಯ ಮೇಲಿರುವ **ದ್ವಾರಪಾಲಕ**ನು ತನ್ನ ಬಲಗೈಯನ್ನು ಚಿನ್ಮುದ್ರೆಯಲ್ಲಿ ಎದೆಯ ಹತ್ತರ ಹಿಡಿದಿರುವನು. ಎಡಗೈಯನ್ನು ಟೊಂಕದ ಮೇಲಿಟ್ಟಿರುವನು. ಇವನ ಬಲಗಡೆಗೆ ಒಂದು ಸಣ್ಣ ಹೆಣ್ಣು ಮೂರ್ತಿಯಿರುವದು. ಈ ಮೂರ್ತಿಗಳ ಕೆಳಗಿನ ಪಟ್ಟಿಕೆಯಲ್ಲಿ ಚಿಪ್ಪಟಿ ಬಾರಿಸುವ, ಮೂರು ಕಣ್ಣುಗಳುಳ್ಳ, ಲಾಗಹೊಡೆಯುವ ಇತ್ಯಾದಿ ಗಣಗಳಿವೆ. ಇದೇ ಕಟ್ಟೆಯ ಪಶ್ಚಿಮ ಭಾಗದಲ್ಲಿ ಚೌರಿಯಂತಹ ವಸ್ತುವನ್ನು

ಹಿಡಿದುಕೊಂಡ ದ್ವಾರಪಾಲಕನ ಒಂದು ಪುರುಷ ವಿಗ್ರಹವಿದೆ. ಇದರ ಬಲಕ್ಕೂ ಒಂದು ಸಣ್ಣ ಹೆಣ್ಣುಗೊಂಬೆ ಇರುವದು. ಇವುಗಳ ಕೆಳಗೆ ಕೆಲವು ಗಣಗಳಿವೆ.

ಮೊಗಸಾಲೆಗೆ ಹೋಗಲು ನಾಲ್ಕು ಚೌಕು ಕಂಬಗಳಿವೆ. ಅವುಗಳ ಮೇಲ್ಭಾಗದಲ್ಲಿ ಸೂಕ್ಷ್ಮವಾಗಿ ಕೆತ್ತಿದ ಆಭರಣಗಳ ಸರ ಮೊದಲಾದವುಗಳಿವೆ. ಈ ಕಂಬಗಳ ಮುಂಭಾಗದಲ್ಲಿದ್ದ ಯಾಳಿಗಳು ಮುಂಜೂರನ್ನು ಎತ್ತಿಹಿಡಿದಂತೆ ತೋರಿಸಿದೆ. ಕಟ್ಟಿಗೆಯ ಮುಂಜೂರಂತೆ ಈ ಲೋವೆಯನ್ನು ರಚಿಸಿದ್ದಾರೆ.

ಮೊಗಸಾಲೆಯ ಪೂರ್ವದ ಗೋಡೆಗೆ **ವರಾಹ**ನ ಮೂರ್ತಿ ಇರುವದು. ಈ ವರಾಹ ದೇವರ ಎಡಗಾಲು ಕಮಲದ ಮೇಲಿದೆ, ಬಲಗಾಲು ನೆಲದ ಮೇಲಿಟ್ಟಿದೆ. ಈ ದೇವರಿಗೆ ನಾಲ್ಕು ಕೈಗಳಿದ್ದು ತನ್ನ ಕೆಳ ಎಡಗೈಯಲ್ಲಿ ಅವನು ಪೃಥ್ವೀದೇವಿಯನ್ನು ಎತ್ತಿ ಹಿಡಿದಿರುವನು. ಮೇಲಿನ ಎರಡೂ ಕೈಗಳಲ್ಲಿ ಶಂಖ, ಚಕ್ರಗಳಿರುತ್ತವೆ. ವರಾಹನು ಕಿರೀಟ ಮತ್ತು ಇತರ ಕೆಲವು ಆಭರಣಗಳನ್ನು ಧರಿಸಿರುವನು. ಈ ಕಿರೀಟವು ಮೇಲೆ ಹೋದಂತೆ ಸಣ್ಣದಾಗುತ್ತ ಹೋಗಿದೆ. ಇವನ ಎಡಬದಿಗೆ ಏಳು ಹೆಡೆಯ ಮನುಷ್ಯಾಕೃತಿಯ ನಾಗನಿರುವನು. ಅವನ ಹೆಂಡತಿಯೂ ಅವನ ಹತ್ತರ ಇರುವಳು. ಇಲ್ಲಿ ಮತ್ತೊಂದು ನಾಗಮೂರ್ತಿಯಿದೆ. ಮೇಲೆ ಗಂಧರ್ವ ದಂಪತಿಗಳಿದ್ದಾರೆ. ವರಾಹನ ಮೇಲಿರುವ ಕಿಡಿಕಿಯಲ್ಲಿ ಗರುಡವಾಹನನಾದ ವಿಷ್ಣು ಇರುವನು.

ವರಾಹನ ಎದುರಿಗೆ, ಪಶ್ಚಿಮ ಗೋಡೆಯ ಮೇಲೆ ವಿಷ್ಣುವಿನ **ತ್ರಿವಿಕ್ರಮ** (ವಾಮನ) ಅವತಾರವಿದೆ. ತ್ರಿವಿಕ್ರಮನು ಬಲಗಾಲನ್ನು ನೆಲದ ಮೇಲಿಟ್ಟು ಎಡಗಾಲನ್ನು ಅಂತರಿಕ್ಷದಲ್ಲಿ ತೂರಿದ್ದಾನೆ (ಚಿತ್ರ ನೋಡಿರಿ). ಇವನಿಗೆ ಎಂಟು ಕೈಗಳಿದ್ದು ಬಲಗೈಗಳಲ್ಲಿ ಚಕ್ರ, ಗದಾ, ಬಾಣ ಮತ್ತು ಖಡ್ಗ ಇರುವವು. ಎಡಗೈಗಳಲ್ಲಿ ಶಂಖ, ಢಾಲು, ಬಿಲ್ಲುಗಳಿವೆ. ಈ ಮೂರ್ತಿಯ ಎಡಕ್ಕೆ ವಾಮನನು ಬಲಿಚಕ್ರವರ್ತಿಯು ದಾನಕೊಡಲು ನೀರು ಬಿಡುತ್ತಿರುವುದನ್ನು ಸ್ವೀಕರಿಸುತ್ತಿದ್ದಾನೆ. ಇವನು ಕೊಡೆಯನ್ನು ಹಿಡಿದುಕೊಂಡಿರುವನು. ಬಲಿಯ ಹೆಂಡತಿಯೂ ಅವನ ಹಿಂದೆ ನಿಂತಿದ್ದಾಳೆ. ಇವರ ಬಳಿಯಲ್ಲಿ ಕೆಲವು ಜನರಿದ್ದಾರೆ. ಒಬ್ಬನು ತ್ರಿವಿಕ್ರಮನ ಕಾಲನ್ನು ಬಲಗಡೆಗೆ ಕುಳಿತು ಜಗ್ಗುತ್ತಿರುವನು. ಅವನ ಹತ್ತರ ಒಬ್ಬ ಖಡ್ಗಧಾರಿ ಇದ್ದಾನೆ. ಎಡಗಡೆಗೆ

ಒಬ್ಬ ದೈತ್ಯನು ಅಸ್ತವ್ಯಸ್ತಾಗಿ ಮೇಲಿಂದ ಕೆಳಗೆ ಬೀಳುತ್ತಿರುವನು. ಇವನ ಮೇಲ್ಭಾಗದಲ್ಲಿ ರವಿ ಮತ್ತು ಚಂದ್ರರು ಇರುತ್ತಾರೆ.

ತ್ರಿವಿಕ್ರಮನ ಕೆಳಗೆ ತಾಳ, ಕೊಂಬು, ಕೊಳಲು ಬಾರಿಸುವ ಮತ್ತು ಕುಣಿಯುವ ಕುಬ್ಜ ಗಣಗಳಿವೆ.

ಈ ಗುಹೆಯ ಮೊಗಶಾಲೆಯ ಛತ್ತಿನಲ್ಲಿ ಗರುಡನ ಮೇಲೆ ಕುಳಿತ ವಿಷ್ಣು, ಸ್ವಸ್ತಿಕ (ಚಿನ್ಹ), ಗಂಧರ್ವ ದಂಪತಿಗಳು, ಮೀನದ ಆಕೃತಿಗಳಿಂದ ಮಾಡಿದ ವಿಷ್ಣುವಿನ ಚಕ್ರ ಇತ್ಯಾದಿ ಕೆತ್ತನೆಗಳಿವೆ.



**ತ್ರಿವಿಕ್ರಮ, ಬಾದಾವಿ**

ಕಂಬಗಳ ಮೇಲಿರುವ ತೊಲೆಗಳ ಮೇಲೆ ಸಮುದ್ರ ಮಂಥನ, ಶೇಷನ ಮೇಲೆ ಮಲಗಿದ ವಿಷ್ಣು ಮತ್ತು ಕೃಷ್ಣನ ಲೀಲೆಗಳಿಗೆ ಸಂಬಂಧಿಸಿದ ಕೆಲವು ದೃಶ್ಯಗಳು ಇರುತ್ತವೆ. ಎರಡು ಕಂಬಗಳನ್ನು ದಾಟಿ ಒಳಗೆ ಹೋದರೆ

೮ ಕಂಬದ ಒಂದು ಮಂಟಪ ಬರುವದು. ಈ ಕಂಬಗಳ ಬೋದುಗಳ ಮೇಲೆ ಸಿಂಹ, ಯಾಳಿ, ಆನೆ ಮೊದಲಾದವುಗಳಿರುವವು. ಮತ್ತು ಕಂಬಗಳ ಮೇಲೆ ಮುದ್ದುಕೊಡುವ, ಪರಸ್ಪರರನ್ನು ಪ್ರೀತಿಸುವ ದಂಪತಿಗಳಿದ್ದಾರೆ.

ತೊಲೆಗಳ ಮೇಲೆಯೂ ಕೆಲವು ದೃಶ್ಯಗಳಿವೆ.

ಈ ಮಂಟಪವು ಗರ್ಭಗುಡಿಯ ಕಡೆಗೆ ಹೋದಂತೆ ಅಗಲವಾಗುತ್ತ ಹೋಗಿದೆ. ಎದುರಿಗೆ ಮಧ್ಯದಲ್ಲಿ ಗರ್ಭಗುಡಿಯಿದ್ದು ಅಲ್ಲಿ ಒಂದು ಪೀಠ ಮಾತ್ರವಿದೆ.

ಮಂಟಪದ ನೆಲದ ಮೇಲೆ ಒಂದು ಕಮಲವಿದೆ.

ಈ ಗುಹೆಯ ಒಂದು ಕಂಬದ ಮೇಲೆ ೭-೮ ನೆಯ ಶತಮಾನದ ಒಂದು ಸಣ್ಣ ಲಿಪಿಯಿದೆ.

## ಸ್ವಾಭಾವಿಕ ಗುಹೆ (ಬೌದ್ಧ ಗುಹೆ)

ಎರಡನೆಯ ಗುಹೆಯಿಂದ ಪೂರ್ವಕ್ಕೆ ೨೫'-೩೦'ಗಳ ಅಂತರದಲ್ಲಿ ಒಂದು ದೊಡ್ಡ ಸ್ವಾಭಾವಿಕ ಗುಹೆ ಇರುವದು. ಇದರ ಪೂರ್ವ ದಿಕ್ಕಿನ ಗೋಡೆಯ ಮೇಲೆ **ಪದ್ಮಪಾಣಿ**ಯ ಮೂರ್ತಿಯನ್ನು ಕಟೆದಿದ್ದಾರೆ. ಇದು ಬೌದ್ಧ ಮತದ ಮೂರ್ತಿ. ಇದರ ತಲೆಯ ಮೇಲೆ ಕಿರೀಟ ಮತ್ತು ಕೆಳಗೆ ಪಾದದ ವರೆಗೆಯಿದ್ದ ವಸ್ತ್ರ ಇರುವವು. ಪದ್ಮಪಾಣಿಯು ಬಲಗೈಯಲ್ಲಿ ಪದ್ಮ ಹಿಡಿದಿರುವನು. ಇವನ ತಲೆಯ ಹಿಂದೆ ಪ್ರಭಾಮಂಡಲವಿದೆ. ಇವನ ಬಲಭಾಗದಲ್ಲಿ, ಕೆಳಗೆ, ಒಬ್ಬ ಭಕ್ತನು ಕೈಮುಗಿದುಕೊಂಡು ಕುಳಿತಿದ್ದಾನೆ. ಇವನ ಬದಿಗಿದ್ದ ಉಳಿದ ಮೂರ್ತಿಗಳು ಜೀವನದಲ್ಲಿ ತಮಗಿದ್ದ ಭಯಗಳಿಂದ ಕಾಪಾಡು ಎಂದು ಪದ್ಮಪಾಣಿಯನ್ನು ಕೇಳುತ್ತಿದ್ದಂತೆ ತೋರುತ್ತದೆ.

ಪದ್ಮಪಾಣಿಯು ಕಮಲದ ಮೇಲೆ ನಿಂತಿದ್ದಾನೆ.

ಈ ಗುಹೆಯ ಪೂರ್ವದ ಗೋಡೆಯ ಮೇಲೆ ಹೊರಬದಿಗೆ ೭-೮ ನೆಯ ಶತಮಾನದ ಶಾಸನಗಳಿವೆ.

## ೩ ನೆಯ ಗುಹೆ (ವೈಷ್ಣವ ಗುಹೆ)

ಎರಡನೆಯ ಗುಹೆಯಿಂದ ಪೂರ್ವಕ್ಕೆ ಸುಮಾರು ೬೦ ಮೆಟ್ಟಲುಗಳನ್ನು ಹತ್ತಿ ಅಲ್ಲಿದ್ದ ಒಂದು ಚೌಕಟ್ಟಿನೊಳಗೆ ಹಾಯಿದು ಹೋದರೆ ೩ ನೆಯ ಗುಹೆ

ಬರುವದು. ಈ ಚೌಕಟ್ಟಿನ ಎರಡೂ ಬದಿಗೆ ಪ್ರಾಚೀನ ಶಾಸನಗಳಿವೆ. ಮತ್ತು ಈ ಹಾದಿಯು ಬಲಬದಿಯಿಂದ ದಕ್ಷಿಣ ಗುಡ್ಡದ ಮೇಲಿನ ಕೋಟೆಗೆ ಹೋಗುವ ಮಾರ್ಗವಿದೆ. ಈ ಕೋಟೆಯ ಮೇಲೆ ೮–೨–೨೫ ನೆಯ ದಿನಾಂಕದ ಒಂದು ತೋಫನ್ನು ಕಾಣಬಹುದು.

'ಈ ಗುಹೆಯು ಬಾದಾಮಿಯ ಎಲ್ಲ ಗುಹೆಗಳಲ್ಲಿಯೂ ಉತ್ತಮವಾಗಿದೆ ಮತ್ತು ಕೆಲಮಟ್ಟಿಗೆ ಭಾರತದ ಇತರ ವೈದಿಕ ಸಾಂಪ್ರದಾಯದ ಕೃತಿಗಳಲ್ಲಿ ಅಗ್ರಸ್ಥಾನವನ್ನು ಪಡೆದಿದೆ. ಇದು ಮುಂಬಯಿಯ ಹತ್ತರವಿದ್ದ ಎಲೆಫಂಟಾದ ಮುಖ್ಯ ಗುಹೆ ಅಥವಾ ವೇರೂಳದ ಧೂಮರ ಗುಹೆಯಷ್ಟು ದೊಡ್ಡದಾಗಿರ-ದಿದ್ದರೂ ಸಾಕಷ್ಟು ದೊಡ್ಡದಿದೆ' ಎಂದು ಒಬ್ಬ ವಿದ್ವಾಂಸರು ಹೇಳಿದ್ದಾರೆ. ಇದು ಮುಂಭಾಗದಲ್ಲಿ ೭೦' ಉದ್ದ ಮತ್ತು ಒಳಗೆ ೪೮½' ಅಗಲವಾಗಿದೆ. ಇದೂ ಸಹ ಉತ್ತರಾಭಿಮುಖವಾಗಿದೆ.

ಚಲುಕ್ಯ ೧ ನೆಯ ಕೀರ್ತಿವರ್ಮನ ೧೨ ನೆಯ ವರ್ಷದಲ್ಲಿ ಅವನ ತಮ್ಮನಾದ **ಮಂಗಲೇಶನು** ಕ್ರಿ. ಶ. ೫೭೮ ರಲ್ಲಿ ಈ ಗುಹೆಯನ್ನು ಕೊರೆಯಿಸಿ ಅಲ್ಲಿ **ವಿಷ್ಣು ಪ್ರತಿಮೆ**ಯನ್ನು ಸ್ಥಾಪಿಸಿದನು. ಈ ಶಾಸನದಿಂದ ಮತ್ತು ಈ ಗುಹೆಯ ಹೊರಗೆ ಎಡಬದಿಗಿರುವ ಮಂಗಲೇಶನ ಶಾಸನದಿಂದ ಈ ಮಹಾ-ವಿಷ್ಣುಗೃಹ (ಗುಹೆ) ದ ರಚನೆಯ ನಿಶ್ಚಿತ ಕಾಲ ಗೊತ್ತಾಗುವದು. ಇಲ್ಲಿಯ ಉಳಿದ ಗುಹೆಗಳಲ್ಲಿ ಇಂಥ ಕಾಲನಿರ್ದೇಶವಿಲ್ಲ. ಮತ್ತು ಅವುಗಳನ್ನು ಇಂಥ ವ್ಯಕ್ತಿಯೆ ಕೊರೆಯಿಸಿದನೆಂದು ತಿಳಿದು ಬಂದಿಲ್ಲ. (ಶಾಸನಗಳು ಎಂಬ ವಿಭಾಗ ನೋಡಿರಿ) ಈ ಗುಹೆಯ ಮುಂಭಾಗದಲ್ಲಿ ಬಿಡಿ ಕಲ್ಲುಗಳನ್ನು ಹೊಡೆದು ಕಟ್ಟಿದ ಕಟ್ಟೆಯಿದೆ. ಅದರ ಮೇಲೆ, ಕಂಬಗಳ ನಡುವೆ ಒಂದೊಂದು ಅಂಕಣ-ದಲ್ಲಿ ಎರಡೆರಡರಂತೆ **ಕುಬ್ಜ ಮೂರ್ತಿಗಳು** ನಾನಾ ಭಂಗಿಗಳಲ್ಲಿ ಕುಣಿದಾ-ಡುತ್ತಿವೆ. ಕೆಲವು ತಮ್ಮ ಕೂದಲುಗಳನ್ನು ಚಿತ್ರ ವಿಚಿತ್ರವಾಗಿ ಕಟ್ಟಿಕೊಂಡಿ-ರುವವು. ಒಂದು ಹಾವು ಹಿಡಿದಿದ್ದರೆ ಮತ್ತೊಂದು ಡೊಳ್ಳನ್ನೊ, ಘಟವಾದ್ಯ ವನ್ನೊ ಬಾರಿಸುತ್ತಿದೆ. ಇಲ್ಲಿ ಕೊಳಲು, ಶಂಖ, ತಂತುವಾದ್ಯ ಮೊದಲಾದವು-ಗಳನ್ನು ಬಾರಿಸುವ ಗಣಗಳೂ ಇವೆ. ಜನರು ಇವುಗಳನ್ನು ನೋಡಿ ಗಣಗಳ ಹಾವಭಾವಕ್ಕೆ ಮನಸೋತು ಮುಗ್ಧರಾಗಿ ಹೋಗುತ್ತಾರೆ. ಗಣಗಳಲ್ಲಿರುವ ಸ್ವೈರವೃತ್ತಿ ಎಲ್ಲರನ್ನೂ ಆಕರ್ಷಿಸಿ ಜೀವನದಲ್ಲಿ ಹಸನ್ಮುಖಿಗಳಾಗಿ ಸುಖ ಪಡೆಯಿರಿ ಎಂದು ಹೇಳುವಂತಿದೆ. ನಿಶ್ಚಿಂತತೆಯೆ ಈ ಕುಬ್ಜ ಮೂರ್ತಿಗಳ

ಜೀವಾಳ. ಕಲ್ಲುಕುಟಿಗರು ಈ ಕುಬ್ಜ ಮೂರ್ತಿಗಳನ್ನು ರಚಿಸುವಾಗ ವಿಶೇಷ ದಕ್ಷತೆಯನ್ನು ವಹಿಸಿದ್ದಾರೆ. ಕೆಲವು ಪಾವುಟಿಗೆಗಳನ್ನು ಹತ್ತಿ ಮೇಲಕ್ಕೆ ಹೋದರೆ ಮುಂಭಾಗದಲ್ಲಿ ೬ ಕಂಬಗಳ ಮೊಗಸಾಲೆ ಬರುವದು. ಈ ಮೊಗಸಾಲೆಯ ಹೊರಗೆ ಮತ್ತು ಕಟ್ಟೆಯ ಮೇಲ್ಭಾಗದಲ್ಲಿ ಪಶ್ಚಿಮ ಗೋಡೆಯ ಮೇಲೆ ಕಲ್ಲಿನಲ್ಲಿ ಉಬ್ಬಿ ಬರುವಂತೆ ಕಟಿದ **ತ್ರಿವಿಕ್ರಮ**ನ ದೊಡ್ಡ ವಿಗ್ರಹ-ವಿರುವದು. ಇದಾದರೂ ೨ನೆಯ ಗುಹೆಯಲ್ಲಿಯ ಇವನ ಮೂರ್ತಿಯಂತೆಯೆ ವಿಷ್ಣುವಿನ ವಿರಾಡ್ರೂಪವನ್ನು ತೋರಿಸುತ್ತದೆ. ಇಲ್ಲಿ ಸಹ ತ್ರಿವಿಕ್ರಮನು ತನ್ನ ಬಲಪಾದವನ್ನು ನೆಲದಮೇಲಿಟ್ಟು ಎಡಗಾಲನ್ನು ಅಂತರಿಕ್ಷದಲ್ಲಿ ಚಾಚಿದ್ದಾನೆ. ತ್ರಿವಿಕ್ರಮನ ನಿಲವು, ಮುಖಚರ್ಯೆ ಅವನಲ್ಲಿರುವ ಗಂಡುತನ ಅಥವಾ ಕೆಚ್ಚನ್ನು ಸಾರುವಂತಿದೆ. ಉತ್ತಮ ಅಲಂಕಾರವುಳ್ಳ ಕಿರೀಟವು ಇವನ ತಲೆಯ ಮೇಲಿದೆ. ಹಿಂದೆ ಪ್ರಭಾಮಂಡಲವಿರುವದು. ತ್ರಿವಿಕ್ರಮನು ಮೈಮೇಲೆ ಕಡಗ, ಕಟಿಬಂಧ, ಬಾಹುಪೂರ, ಕಂಠಾಭರಣ, ಕರ್ಣಾಭರಣ ಮೊದಲಾದವುಗಳನ್ನು ಧರಿಸಿದ್ದಾನೆ. ಅವನು ತನ್ನ ಬಲಗಡೆಯ ನಾಲ್ಕು ಕೈಗಳಲ್ಲಿ ಖಡ್ಗ, ಬಾಣ, ಚಕ್ರ, ಗದೆಗಳನ್ನು ಮತ್ತು ಎಡಗಡೆಯ ಮೂರು ಕೈಗಳಲ್ಲಿ ಶಂಖ, ಚಕ್ರ, ಬಿಲ್ಲು, ಢಾಲುಗಳನ್ನು ಹಿಡಿದಿರುವನು. ಮತ್ತೊಂದು ಕೈ ಬದಿಗೆ ಚಾಚಿದೆ.

ತ್ರಿವಿಕ್ರಮನ ಎಡಕ್ಕೆಯಿದ್ದ ವಾಮನನ ವಿಗ್ರಹವು ಪೂರ್ಣ ಒಡೆದು ಹೋಗಿದೆ. ಬಲಿಚಕ್ರವರ್ತಿಯು ತನ್ನ ಹೆಂಡತಿಯನ್ನು ಕೂಡಿಕೊಂಡು ದಾನವನ್ನು ಧಾರೆಯೆರೆಯುತ್ತಿದ್ದಾನೆ. ಬಲಚಕ್ರವರ್ತಿಯ ಮುಂದೆ ಶುಕ್ರಾ-ಚಾರ್ಯರಿದ್ದಾರೆ. ಇವರ ಮೇಲ್ಭಾಗದಲ್ಲಿ ಒಬ್ಬ ದೈತ್ಯ ಅಸ್ತವ್ಯಸ್ತಾಗಿ ಕೆಳಗೆ ಬೀಳುತ್ತಿರುವನು. ೨ ನೆಯ ಗುಹೆಯಲ್ಲಿಯಂತೆ ಇಲ್ಲಿಯೂ ಸೂರ್ಯ ಮತ್ತು ಚಂದ್ರರು ತ್ರಿವಿಕ್ರಮನ ಎಡಗಡೆಗೆ ಕಾಣುತ್ತಾರೆ. ಬಲಿ ಚಕ್ರವರ್ತಿಯು ಅಶ್ವತ್ಥಾಮ, ವ್ಯಾಸ ಮೊದಲಾದ ಏಳು ಮಂದಿ ಚಿರಂಜೀವಿಗಳಲ್ಲಿ ಒಬ್ಬ. ತಾನು ಮಹಾದಾನಿ ಎಂಬ ಗರ್ವವು ಅವನನ್ನು ಹಾಳುಮಾಡಿತು.

ತ್ರಿವಿಕ್ರಮನ ಎದುರಿಗೆ ಪೂರ್ವದಿಕ್ಕಿನ ಗೋಡೆಯ ಮೇಲೆ ಅಷ್ಟಕರ-ಗಳುಳ್ಳ ವಿಷ್ಣುವಿನ ನಿಂತ ವಿಗ್ರಹವನ್ನು ನೋಡಬಹುದು. ಇಲ್ಲಿ ವಿಷ್ಣು ತನ್ನ ನಾಲ್ಕೂ ಬಲಗೈಗಳಲ್ಲಿ ಚಕ್ರ, ಬಾಣ, ಗದಾ ಮತ್ತು ಖಡ್ಗಗಳನ್ನು ಹಿಡಿದಿರು-ವನು. ಎಡಗಡೆಯ ಎರಡು ಕೈಗಳು ಶಂಖ, ಬಿಲ್ಲುಗಳನ್ನು ಹಿಡಿದಿವೆ ಮತ್ತು

ಉಳಿದವು ಬೇರೆ ಮುದ್ರೆಗಳಲ್ಲಿವೆ. ಈ ವಿಗ್ರಹದ ಕಿರೀಟವು ಚನ್ನಾಗಿ ಅಲಂಕೃತವಾಗಿದೆ. ಮೇಲೆ ಹಿಂಭಾಗದಲ್ಲಿ ನರಸಿಂಹನ ಮೂರ್ತಿಯಿದೆ. ಈ ಮೂರ್ತಿಯ ಬಲಭಾಗದಲ್ಲಿ, ಮುಂಜೂರಿನ ಮೇಲೆ, ಗಂಧರ್ವ ವಿಗ್ರಹಗಳಿರುತ್ತವೆ.

ಗವಿಯ ಮುಂಜೂರಿನ ನಡುವೆ ಒಳಬದಿಗೆ **ಗರುಡ**ನನ್ನು ಕೆತ್ತಿದ್ದಾರೆ. ಇವನು ತನ್ನ ರೆಕ್ಕೆಗಳನ್ನು ಪಸರಿಸಿ ಆಕಾಶದಲ್ಲಿ ಹಾರಾಡುತ್ತಿದ್ದಂತೆ ತೋರಿಸಿದೆ. ಇವನ ಬಲಗಡೆಯ ರೆಕ್ಕೆಯ ಮೇಲೆ 'ಶ್ರೀ ನೆಲವಜ್ಕಿ' ಎಂಬ ೬ ನೆಯ ಶತಮಾನದ ಒಂದು ಲಿಪಿಯಿದೆ. ಗರುಡನ ಎರಡೂ ಬದಿಗೆ ಗಂಧರ್ವ ದಂಪತಿಗಳಿದ್ದಾರೆ. ಈ ಗರುಡನ ಬಲಗಡೆಗೆ ಮತ್ತು ಮುಂಜೂರಿನ ಒಳಗೆ ೬ ನೆಯ ಶತಮಾನದ ಕೆಲವು ವರ್ಣಚಿತ್ರಗಳು ಕೆಲಮಟ್ಟಿಗೆ ಅಸ್ಪಷ್ಟ ಸ್ಥಿತಿಯಲ್ಲಿ ಕಾಣಿಸುವವು. (ವರ್ಣಚಿತ್ರಗಳು ಎಂಬ ವಿಭಾಗ ನೋಡಿರಿ). ಇವುಗಳನ್ನು ಇತ್ತೀಚೆಗೆ ರಸಾಯನ ಬಳೆದು ಸ್ವಚ್ಛಮಾಡಿ ಕೇಂದ್ರ ಆರ್ಕಿಯಾಲಜಿ ಖಾತೆಯವರು ಸಂರಕ್ಷಿಸುತ್ತಿದ್ದಾರೆ. ಇಲ್ಲಿ ಒಂದೆರಡು ಕೆಂಪು ಬಣ್ಣದಿಂದ ಬರೆದ ಲಿಪಿಗಳೂ ಇವೆ.

## ಮದನಕೈ ವಿಗ್ರಹಗಳು

ಹೊರಗಿನ ಕಟ್ಟೆಯಿಂದ ಮೊಗಸಾಲೆಗೆ ಹೋಗಲು ಆರು ಕಂಬಗಳಿವೆ. ಈ ಕಂಬಗಳ ಮೇಲೆ ನಾನಾ ರೀತಿಯಲ್ಲಿ ನಿಂತ ೩', ೩½' ಎತ್ತರವಾದ ಮದನಕೈ ವಿಗ್ರಹಗಳು ಕಂಬಗಳ ಮೂರು ಭಾಗಗಳಲ್ಲಿ ಇವೆ. ಈ ಕಂಬಗಳ ಹೊರಬದಿಗಿದ್ದ ಯಾಳಿಗಳು ಮುಂಜೂರನ್ನು ಹೊತ್ತುಕೊಂಡಂತೆ ತೋರಿಸಿದೆ. ಈ ಯಾಳಿಗಳ ಕೆಳಭಾಗದಲ್ಲಿ ಹುಡುಗರು ಕುಳಿತಿದ್ದಾರೆ. ಗುಹೆಯ ಎಡಭಾಗದಿಂದ ಪ್ರಾರಂಭಮಾಡಿ ನೋಡಿದರೆ ಮದನ ಕೈವಿಗ್ರಗಳು (ಚಿತ್ರ ನೋಡಿರಿ) ಈ ಪ್ರಕಾರ ಇವೆ:—

**ಅರ್ಧಕಂಬ:— ಗಿಡದ ಬುಡಕ್ಕೆ ನಿಂತ ಗಂಡ ಹೆಂಡಿರ ಜೋಡು ಇದೆ. ಪುರುಷನು ತನ್ನ ಬಲಗೈಯ ಬೆರಳುಗಳನ್ನು ತುಟಿಗಳ ಮೇಲಿಟ್ಟುಕೊಂಡು ಆಶ್ಚರ್ಯ ಚಕಿತನಾಗಿದ್ದಾನೆ. ಅವನ ಬದಿಗಿದ್ದ ಸ್ತ್ರೀ ಮೊಣಕಾಲಿನ ವರೆಗೆ ಸೀರೆಯನ್ನುಟ್ಟು ಕೊಂಡಿದ್ದಾಳೆ. ಇವಳ ಹತ್ತಿರ ನಿಂತ ಕುಬ್ಜ ಸ್ತ್ರೀ ಒಂದು ಪಾತ್ರೆಯನ್ನು ಕೈಯಲ್ಲಿ ಹಿಡಿದಿರುವಳು.**

**೧ ನೆಯ ಕಂಬ:**— ಮೇಲಿನ ಮೂರ್ತಿಗಳ ಎದುರಿಗೆ ನಾಗದಂಪತಿಗಳು ಬೇಸಿಗೆಯ ಸಮಯದಲ್ಲಿ ಪರಸ್ಪರ ಪ್ರೇಮದಲ್ಲಿದ್ದಾರೆ. ಮತ್ತೊಂದು ಭಾಗದಲ್ಲಿ ಒಬ್ಬ ಸ್ತ್ರೀ ತನ್ನ ಕೂದಲುಗಳನ್ನು ಕನ್ನಡಿಯಲ್ಲಿ ನೋಡಿ ಸರಿಪಡಿಸಿಕೊಳ್ಳುತ್ತಿದ್ದಾಳೆ. ಇದೇ ಕಂಬದ ಮತ್ತೊಂದು ಮಗ್ಗಲಿಗೆ **ಶಿವನು** ಖಿನ್ನಳಾದ **ಪಾರ್ವತಿ**ಯನ್ನು ಸಂತೈಸುತ್ತಿದ್ದಂತೆ ತೋರಿಸಿದೆ.



ಮದನಕೈ ವಿಗ್ರಹಗಳು, ಬಾದಾಮಿ

**೨ ನೆಯ ಕಂಬ:**— ಗಿಡದ ಕೆಳಗೆ ಅರ್ಧನಾರೀಶ್ವರನು ತ್ರಿಭಂಗಿಯಲ್ಲಿದ್ದಾನೆ. ಮತ್ತೊಂದು ಮಗ್ಗಲಲ್ಲಿ ಮಾವಿನ ಗಿಡದ ಮೇಲೆ ಮಂಗಗಳು ಕುಳಿತಿವೆ. ಇದರ ಬುಡದಲ್ಲಿ ಓರ್ವ ಸ್ತ್ರೀ, ಕೈಯಲ್ಲಿ ಏನನ್ನೊ ಹಿಡಿದುಕೊಂಡಿರುವಳು. ಅವಳ ಹತ್ತಿರ ಒಂದು ಗಿಡ್ಡಮೂರ್ತಿ ಇದೆ.

ಮೂರನೆಯ ಮುಗ್ಗಲಿಗೆ ಗಿಡದ ಕೆಳಗೆ ನಿಂತ ಮತ್ತೊಂದು ಗಂಡಹೆಂಡಿರ ಜೋಡು ಇದೆ. ಇದರ ಕೈಯಲ್ಲಿಯ ಉಂಗುರಗಳನ್ನು ನೋಡಬಹುದು. ಇಲ್ಲಿಯ ಸ್ತ್ರೀಯ ಸೀರೆಯ ಮೇಲಿನ **ಕಸೂತಿಯ ಕೆಲಸ** ನೋಡುವಂತಹದಿದೆ. ಇವಳು ತನ್ನ ಹೆಬ್ಬಟ್ಟಿನಲ್ಲಿ ಉಂಗುರವನ್ನಿಟ್ಟಿರುವಳು.

**೩ ನೆಯ ಕಂಬ:—** ಇಲ್ಲಿಯೂ ಒಂದು ಗಂಡಹೆಂಡಿರ ಜೋಡು ಇದೆ. ಹೆಂಗುಸು ಉಟ್ಟ ಸೀರೆಯು ತೆರೆ ತೆರೆಯಾಗಿ ತೋರುತ್ತದೆ. ಮತ್ತೊಂದು ಮುಗ್ಗಲ-ಲ್ಲಿರುವ ಸ್ತ್ರೀ ಒಬ್ಬ ಗಿಡ್ಡ ಸ್ತ್ರೀಯ ತಲೆಯ ಮೇಲೆ ಕೈಯನ್ನಿಟ್ಟು ಏನನ್ನೋ ಯೋಚಿಸುತ್ತ ತ್ರಿಭಂಗಿಯಲ್ಲಿ ನಿಂತಿದ್ದಾಳೆ. ಅವಳ ಬದಿಗಿದ್ದ ಒಬ್ಬ ಗಿಡ್ಡ ಹೆಂಗಸು ಚಾಮರ ಹಿಡಿದಿರುವಳು.

ಮೂರನೆಯ ಮುಗ್ಗಲಲ್ಲಿ ಸ್ತ್ರೀ ಪುರುಷರ ಜೋಡು ಗಿಡದ ಕೆಳಗೆ ನಿಂತಿದೆ. ಗಂಡನ ಬಲಗೈಯಲ್ಲಿ ಕಮಲವಿದೆ. ಆವನಿಗೆ ಒರಗಿಕೊಂಡ ಹೆಂಡತಿಯು ಹೆಳಲನ್ನು ಎಡಗೈಯಲ್ಲಿ ಹಿಡಿದಿರುವಳು. ಇವಳ ಬಡ ನಡುವಿನ ಮೇಲ್ಭಾಗದಲ್ಲಿ ಕುಚಗಳು ವಿಶೇಷ ಭಾರವಾಗಿ ಕಾಣುತ್ತವೆ.

**೪ ನೆಯ ಕಂಬ:—** ಕಬ್ಬಿನ ಬಿಲ್ಲನ್ನು ಹಿಡಿದು ಕಾಮನು ಗಿಡದ ಕೆಳಗೆ ನಿಂತಿದ್ದಾನೆ. ಇವನ ಬಲಗೈಯಲ್ಲಿ ಬಾಣವಿದೆ. ಅವನ ಹಿಂದೆ ಮಕರಧ್ವಜವಿರುವದು. ರತಿ ಹತ್ತಿರ ನಿಂತಿದ್ದಾಳೆ. ಇಬ್ಬರ ತಲೆಯ ಮೇಲೆಯೂ ಕಿರೀಟವಿರುವವು. ರತಿಯ ತುರುಬು ಬೆನ್ನಿನ ಮೇಲೆ ಜೋತುಬಿದ್ದಿದೆ. ಕಾಮನ ಬಲಗಡೆಗೆ ಕುದುರೆಯ ಮುಖ ಮತ್ತು ಮನುಷ್ಯ ದೇಹವುಳ್ಳ ಒಬ್ಬ ತುಂಬರನು ವಾದ್ಯ ಹಿಡಿದು ನಿಂತಿರುವನು. ಮತ್ತೊಂದು ಮುಗ್ಗಲಲ್ಲಿ ಒಬ್ಬ ಸ್ತ್ರೀ ಗಿಡದ ಟೊಂಗೆಯನ್ನು ಹಿಡಿದು, ದ್ವಿಭಂಗಿಯಲ್ಲಿ ಏನನ್ನೋ ಯೋಚಿಸುವಂತೆ ನಿಂತಿದ್ದಾಳೆ. ಇವಳ ಹತ್ತಿರ ಒಂದು ನವಿಲಿದೆ. ಇಲ್ಲಿಯೇ ಇದ್ದ ಕುಬ್ಜ ಸ್ತ್ರೀ ಎಡಗೈಯಲ್ಲಿ ಕರಂಡಕ(?)ವನ್ನು ಹಿಡಿದು ಬಲಗೈಯನ್ನು ಬಾಯಿ ಮೇಲಿಟ್ಟುಕೊಂಡು ಆಶ್ಚರ್ಯಚಕಿತಳಾಗಿದ್ದಾಳೆ. ಇವಳ ಹಿಂದೆ ಒಬ್ಬ ವಯಸ್ಸಾದ ಮನುಷ್ಯನಿರುವನು.

ಮೂರನೆಯ ಮುಗ್ಗಲಿಗೆ **ಶಿವಪಾರ್ವತಿಯರು** ನಿಂತಿರುವರು. ಒಬ್ಬ ಕುಬ್ಜನು ಶಿವನ ಮೇಲೆ ಛತ್ರವನ್ನು ಹಿಡಿದಿರುವನು. ಪಾರ್ವತಿಯ ಎಡಕ್ಕೆ ಕಾರ್ತಿ-ಕೇಯನು ನವಿಲ ಮೇಲೆ ಕುಳಿತಿರುವನು.

**೫ ನೆಯ ಕಂಬ:—** ಗಿಡದ ಬುಡದಲ್ಲಿ ದಂಪತಿಗಳು ಒಬ್ಬರೊಬ್ಬರನ್ನು ಅಪ್ಪಿಕೊಂಡು ನಿಂತಿರುವರು. ಎರಡನೆಯ ಮುಗ್ಗಲಲ್ಲಿ ಒಬ್ಬ ಸ್ತ್ರೀ ತ್ರಿಭಂಗಿಯಲ್ಲಿ

ನಿಂತಿದ್ದಾಳೆ. ಇವಳ ಬಲಗೈಯಲ್ಲಿ ಪದ್ಮದ ಮೊಗ್ಗೆಯಿದೆ. ಇವಳ ಮೇಲಿರುವ ಗಿಡದ ಮೇಲೆ ಒಂದು ಮಂಗ ಕುಳಿತಿದೆ.

ಮೂರನೆಯ ಬಾಜುವಿಗೆ ದಂಪತಿಗಳು ನಿಂತಿದ್ದಾರೆ. ಹೆಂಗಸು ಎಡಗೈಯಲ್ಲಿ ಒಂದು ಪಾನಪಾತ್ರೆಯನ್ನು ಹಿಡಿದಿರುವಳು.

**೬ ನೆಯ ಕಂಬ :—** ಸ್ತ್ರೀಪುರುಷರ ಜೋಡು ಗಿಡದ ಕೆಳಗೆ ಇರುವದು. ಈ ಸ್ತ್ರೀಪುರುಷರು ಕರ್ಣಕುಂಡಲಗಳನ್ನು ಧರಿಸಿದ್ದಾರೆ. ಸ್ತ್ರೀಯು **ಕಸೂತಿ ಹಾಕಿದ ಸೀರೆ**ಯನ್ನುಟ್ಟಿದ್ದಾಳೆ. ಅವಳ ಕೈಗಳಲ್ಲಿ ಬಳೆಗಳಿವೆ. ಈ ದಂಪತಿಗಳು ತಲೆಯ ಕೂದಲುಗಳನ್ನು ಸುಂದರವಾಗಿ ಕಟ್ಟಿಕೊಂಡಿದ್ದಾರೆ.

ಎರಡನೆಯ ಮಗ್ಗಲಲ್ಲಿ ಒಬ್ಬ ಸ್ತ್ರೀ ಕತ್ತರಿಗಾಲು ಹಾಕಿ, ತನ್ನ ಬಲಗೈಯನ್ನು ಒಬ್ಬ ಕುಬ್ಜ ಸ್ತ್ರೀಯ ಮೇಲೆ ಊರಿ ನಿಂತಿರುವಳು.

ಮೂರನೆಯ ಬದಿಗೆ ಶಿವ ಪಾರ್ವತಿಯರು ಗಿಡದ ಕೆಳಗೆ ನಿಂತಿರುವರು. ಶಿವನು ತನ್ನ ಎಡಗಾಲನ್ನು ಒಬ್ಬ ಗಣನ ತಲೆಯ ಮೇಲಿಟ್ಟಿದ್ದಾನೆ. ಪಾರ್ವತಿಯು ಇವನ ತಲೆಯ ಮೇಲೆ ಕೈಯಿಟ್ಟು ನಿಂತಿದ್ದಾಳೆ. ಶಿವನು ತನ್ನ ಎಡಗೈಯನ್ನು ಮೇಲೆ ಎತ್ತಿ ಹಿಡಿದಿದ್ದಾನೆ.

ಪಶ್ಚಿಮ ಗೋಡೆಯ ಅರ್ಧಕಂಬದ ಮೇಲೆ ನಿಂತ ದಂಪತಿಗಳು ಪ್ರಣಯಮಗ್ನರಾಗಿರುವರು. ಗಂಡನು ತನ್ನ ಮುಂದೆ ನಿಂತ ಹೇಡತಿಯನ್ನು ಹಿಡಿದಿರುವನು. ಹೆಂಡತಿ ಗಂಡನ ಕಿರೀಟವನ್ನು ಎಡಗೈಯಿಂದ ಹಿಡಿದಿದ್ದಾಳೆ. ಇಲ್ಲಿಯೇ ಮತ್ತೊಂದು ಬದಿಗೆ ಒಬ್ಬ ಸ್ತ್ರೀಯ ಮೂರ್ತಿ ಇರುವದು.

ಮೊಗಸಾಲೆಯ ಪಶ್ಚಿಮ ಗೋಡೆಯಲ್ಲಿ **ನರಸಿಂಹನ** ದೊಡ್ಡ (೧೧' ಎತ್ತರವಾದ) ವಿಗ್ರಹವಿರುವದು. ಅದಕ್ಕೆ ನಾಲ್ಕು ಕೈಗಳಿದ್ದು ಬಲಗೈಗಳಲ್ಲಿ ಚಕ್ರ ಮತ್ತು ಹಣ್ಣು (?) ಇವೆ. ಎಡದ ಮೇಲ್ಗೈಯಲ್ಲಿ ಚಾಮರದಂತಹ ವಸ್ತುವಿದೆ ಮತ್ತು ಕೆಳಗೈಯು ಗದೆಯಮೇಲಿಟ್ಟಿದೆ. (ಈ ಗದೆಯನ್ನು ಯಾರೊ ಇತ್ತೀಚೆಗೆ ದ್ರವ್ಯದಾಸೆಗಾಗಿ ಒಡೆದಿದ್ದಾರೆ.) ತಲೆಯ ಮೇಲಿನ ಅಯಾಲು ಭುಜದ ಮೇಲೆ ಬಿದ್ದಿದೆ. ತಲೆಯ ಮೇಲ್ಭಾಗದಲ್ಲಿ ಒಂದು ಕಮಲವಿದೆ. ನರಸಿಂಹನು ಚಡ್ಡಿಯನ್ನು ಧರಿಸಿದಂತೆ ತೋರುವದು. ಅವನ ಬಲಗಡೆಗಿದ್ದ ಕೆದರಿದ ಕೂದಲು ಮತ್ತು ದಪ್ಪನ್ನ ತುಟಿಯುಳ್ಳ ಮೂರ್ತಿಯು ನರಸಿಂಹನನ್ನೆ ನೋಡುತ್ತಿದೆ. ಇದು ಪ್ರಹ್ಲಾದನದೆಂದು ಊಹಿಸಬಹುದು. ರಸಿಂಹನು ನಿಂತ ಭಂಗಿ ಮತ್ತು ಅವನು ತೆರೆದ ಕಣ್ಣುಗಳು ಅವನ ಉಗ್ರ

ರೂಪ ಮತ್ತು ಗಾಂಭೀರ್ಯವನ್ನು ಸೂಚಿಸುತ್ತವೆ. ಇವನ ಎಡಗಡೆಗೆ ಗರುಡನು ತ್ರಿಭಂಗಿಯಲ್ಲಿ ನಿಂತಿರುವನು. ವಾಡಿಕೆಯಂತೆ ಅಂತರಿಕ್ಷದಲ್ಲಿ ಗಂಧರ್ವರಿರುವರು.

ನರಸಿಂಹನ ಬಲಗಡೆಯ ಗೋಡೆಯ ಮೇಲೆ ಸುಮಾರು ಅಷ್ಟೇ ಆಕಾರದ **ಹರಿಹರ**ನ ಮೂರ್ತಿಯಿದೆ. ಇದರ ಬಲ ಭಾಗ ಶಿವನದು, ಎಡ ಭಾಗ ವಿಷ್ಣು-ವಿನದು. ಎರಡೂ ಬಲಗೈಗಳಲ್ಲಿ ಖಟ್ವಾಂಗ ಮತ್ತು ಹಣ್ಣು (?) ಇವೆ. ಎಡದ ಮೇಲ್ಗೈಯಲ್ಲಿ ಶಂಖವಿದೆ. ಮತ್ತು ಕೆಳಗೈ ಟೊಂಕದ ಮೇಲಿದೆ. ಶಿವನ ಚಿನ್ಹಗಳಾದ ಚಂದ್ರ, ನಾಗ, ಕಪಾಲ ಇವು ಮೂರ್ತಿಯ ಬಲಭಾಗದಲ್ಲಿವೆ. ಎಡಭಾಗದಲ್ಲಿದ್ದ ಕಿರೀಟ, ಮಕರಕುಂಡಲ ಇತ್ಯಾದಿಗಳು ವಿಷ್ಣುವಿನ ರೂಪ-ವನ್ನು ತೋರಿಸುತ್ತವೆ. ತಲೆಯ ಹಿಂಬದಿಗೆ ಪ್ರಭಾಮಂಡಲವಿರುವದು.

ಅದೇ ಮೊಗಸಾಲೆಯ ಬಲಭಾಗದಲ್ಲಿ ದಕ್ಷಿಣ ಗೋಡೆಯ ಮೇಲೆ **ವರಾಹ** ಮೂರ್ತಿಯು ಪೃಥ್ವಿಯನ್ನು ಎಡಗೈಯಲ್ಲಿ ಎತ್ತಿಕೊಂಡು ನಿಂತಿದೆ. ಇದರ ಎರಡೂ ಮೇಲ್ಗೈಗಳಲ್ಲಿ ಶಂಖ, ಚಕ್ರಗಳಿವೆ. ವರಾಹನು ತಲೆಯ ಮೇಲೆ ಕಿರೀಟ ಧರಿಸಿರುವನು ಮತ್ತು ಎಡಗಾಲಿನಿಂದ ಒಬ್ಬ ನಾಗನನ್ನು ಮೆಟ್ಟಿ ನಿಂತಿದ್ದಾನೆ. ಇಲ್ಲಿ ಇತರ ನಾಗ ಮೂರ್ತಿಗಳೂ ಇವೆ.

ಈ ಎಲ್ಲ ಮೂರ್ತಿಗಳಿಗೆ ಮೊದಲು ಕೆಂಪು ಬಣ್ಣ ಹಚ್ಚಿತ್ತೆಂದು ಗೊತ್ತಾಗುವದು.

ವರಾಹ ಮೂರ್ತಿಯ ಹತ್ತಿರವಿದ್ದ ಪೂರ್ವದ ಗೋಡೆಯ ಮೇಲೆ ಐದು ಹೆಡೆಯ ಶೇಷನ ಮೇಲೆ **ವಿಷ್ಣು** ಕುಳಿತಿದ್ದಾನೆ. ( ಚಿತ್ರ ನೋಡಿರಿ. ) ಇವನಿಗೆ ನಾಲ್ಕು ಕೈಗಳಿದ್ದು ಬಲದ ಎರಡು ಕೈಗಳಲ್ಲಿ ಚಕ್ರ ಮತ್ತು ಹಣ್ಣು (?) ಇರುತ್ತವೆ. ಮೇಲಿನ ಎಡಗೈಯಲ್ಲಿ ಶಂಖವಿದೆ. ಎಡಗಡೆಯ ಕೆಳಗಿನ ಕೈ ಕಾಲಿನ ಮೇಲೆಯಿಟ್ಟಿದೆ. ಇವನ ಎರಡೂ ಮಗ್ಗಲಿಗೆ ನಾಗಕನ್ನೆಯರು ಚವರಿಯನ್ನು ಬೀಸುತ್ತಿದ್ದಾರೆ. ಮನುಷ್ಯರಂತೆ ಮುಖವುಳ್ಳ ಗರುಡನು ವಿಷ್ಣುವಿನ ಬಲಗಡೆಗೆ ಕೈಗಳನ್ನು ಮುಂದೆ ಕತ್ತರಿ ಆಕಾರದಲ್ಲಿ ಕಟ್ಟಿಕೊಂಡು ಕುಳಿತಿರುವನು. ವಿಷ್ಣುವಿನ ಎಡಭಾಗದಲ್ಲಿದ್ದ ಹೆಣ್ಣು ಮೂರ್ತಿ ಲಕ್ಷ್ಮಿಯ-ದೆಂದು ತೋರುವದು.

ಛತ್ತಿನ ಮೇಲೆ ಎರಡು ಕೈಗಳುಳ್ಳ ವಿಷ್ಣು, ಆನೆಯ ಮೇಲೆ ಕುಳಿತ ಇಂದ್ರ ( ಇವನ ಸುತ್ತಲೂ ನರ್ತಿಸುವ ಕೆಲವು ಮೂರ್ತಿಗಳಿವೆ ), ನಂದಿ-

ಯನ್ನೇರಿದ ಶಿವ ( ಇವನ ಹತ್ತಿರವೂ ಗಣಪತಿ ಮೊದಲಾದವರು ಕುಳಿತಿರು-ತ್ತಿದ್ದಾರೆ), ವಿಷ್ಣು ( ಇವನ ಸುತ್ತಲೂ ಇಂದ್ರ, ಅಗ್ನಿ, ಯಮ, ಕುಬೇರ ಮೊದಲಾದವರಿದ್ದಾರೆ ), ಹಂಸವಾಹನನಾದ ಬ್ರಹ್ಮ ಮತ್ತು ಮಕರದ



**ವಿಷ್ಣು, ಬಾದಾಮಿ**

ಮೇಲೆ ಕುಳಿತ ವರುಣ ಮುಂತಾದವರು ವರ್ತುಳಗಳಲ್ಲಿ ಕಾಣಿಸಿಕೊಳ್ಳು-ತ್ತಾರೆ. ಇದೇ ಮೊಗಸಾಲೆಯ ಮೇಲ್ಭಾಗದಲ್ಲಿದ್ದ ತೊಲೆಗಳ ಮೇಲೆ ಸಮುದ್ರಮಂಥನ, ಶೇಷಶಾಯಿ (ವಿಷ್ಣು), ಕೃಷ್ಣಲೀಲೆ ಇತ್ಯಾದಿ ದೃಶ್ಯಗಳಿವೆ.

ಈ ಮೊಗಸಾಲೆಯ ಬಲಗಡೆಯ ಅರ್ಧ ಕಂಬದ ಮೇಲಿರುವ ಶಾಸನವು ಈ ವಿಷ್ಣುಗುಹೆಯನ್ನು ಕ್ರಿ. ಶ. ೫೭೮ರಲ್ಲಿ ಮಂಗಲೇಶನು ತಯಾರಿಸಿದನೆಂದು ಹೇಳುತ್ತದೆ. ( ಶಾಸನಗಳು ಎಂಬ ವಿಭಾಗ ನೋಡಿರಿ ).

ಮೊಗಸಾಲೆ ಮತ್ತು ಮಂಟಪದ ನಡುವೆ ೪ ಕಂಬಗಳಿವೆ. ಮಂಟಪಕ್ಕೆ ೧೪ ಕಂಬಗಳು, ಕೆಲವು ಅರ್ಧ ಕಂಬಗಳು ಇರುತ್ತವೆ. ಈ ಕಂಬಗಳ ಮೇಲೆಯಿದ್ದ ಯಾಳಿಗಳು ಛತ್ತನ್ನು ತಮ್ಮ ಮೇಲೆ ಹೊತ್ತುಕೊಂಡಂತೆ

ತೋರಿಸಿದೆ. ಮಂಟಪದ ಕೆಲವು ಕಂಬಗಳ ಮೇಲೆ ಸತಿಪತಿಯರ ಜೋಡು-ಗಳು ಶೃಂಗಾರಲೀಲೆಯಲ್ಲಿವೆ.

ಇಲ್ಲಿಯ ಕಂಬಗಳ ಮೇಲೆ ೧೬ನೆಯ ಶತಮಾನದ ಎರಡು ತೆಲಗು ಶಾಸನಗಳಿವೆ.

ಈ ಮಂಟಪದ ಛತ್ತಿನಲ್ಲಿ ಗಂಧರ್ವ ದಂಪತಿಗಳು, ಹಂಸದ ಮೇಲೆ ಕುಳಿತ ಬ್ರಹ್ಮಾ, ಕಾರ್ತಿಕೇಯ, ಇಂದ್ರ, ವರುಣ ಮೊದಲಾದವರಿದ್ದಾರೆ.

ಗುಹೆಯ ಒಳಗೆ ಎದುರಿಗಿದ್ದ ಗರ್ಭಗುಡಿಯಲ್ಲಿ ಈಗ ಪೀಠ ಮಾತ್ರ ಉಳಿದಿದೆ. ಅಲ್ಲಿ ಮೂರ್ತಿಯಿಲ್ಲ.

ಈ ಗುಹೆಯ ಪಡಸಾಲೆ ಮತ್ತು ಮಂಟಪ ಎರಡೂ ಕೂಡಿ ಸುಮಾರು ೨೦೦ ಜನ ಕೂಡುವಷ್ಟು ವಿಸ್ತಾರವಾಗಿದೆ.

ಈ ಗುಹೆಯ ಹೊರಗೆ ಎಡಬದಿಗೆ ಮಂಗಳೇಶನ ಪ್ರಾಚೀನ ಕನ್ನಡ ಶಾಸನವಿರುವದು. ( ಶಾಸನಗಳು ಎಂಬ ವಿಭಾಗ ನೋಡಿರಿ ). ಈ ಶಾಸನದ ಹತ್ತರ 'ಗುಣಪಾಲನ್' ಮೊದಲಾದ ಸಣ್ಣ ಲಿಪಿಗಳಿವೆ.

## ೪ ನೆಯ ಗುಹೆ ( ಜೈನ ಗುಹೆ )

೩ ನೆಯ ಗುಹೆಯಿಂದ ೪ ನೆಯ ಗುಹೆಗೆ ಹೋಗುವಾಗ, ಬಲಗಡೆಗೆ, ಬಂಡೆಗಲ್ಲ ಮೇಲೆ ' ಶ್ರೀ ಕೊಟ್ಟಲನ್ ' ಮೊದಲಾದ ಕೆಲವು ೭-೮ ನೆಯ ಶತಮಾನದ ಶಾಸನಗಳಿವೆ. ೪ ನೆಯ ಗುಹೆಯು ಒಂದು ಜಿನಾಲಯ. ಇಲ್ಲಿಯ ಗುಹೆಗಳಲ್ಲಿ ಇದು ಎಲ್ಲಕ್ಕೂ ಮೇಲಿದೆ. ಆದುದರಿಂದ ಮೊದಲು ಇದಕ್ಕೆ ಮೇಗಣ ಬಸದಿಯೆಂದು ಕರೆಯುತ್ತಿದ್ದುದು ಕಾಲಕ್ರಮೇಣ, ಮೇಣಬಸ್ತಿಯಾಗಿ ಇಲ್ಲಿಯ ಎಲ್ಲ ಗುಹೆಗಳಿಗೂ **ಮೇಣಬಸ್ತಿ**ಯೆಂಬ ಹೆಸರು ಬಿದ್ದಿದೆ. ಈ ಗುಹೆಗಳಲ್ಲಿಯ ಕಲ್ಲನ್ನು ಮೇಣದಂತೆ ಉಪಯೋಗಿಸಿದ್ದಕ್ಕೆ ಇವುಗಳಿಗೆ ಮೇಣಬಸ್ತಿ ಎಂಬ ಹೆಸರು ಬಂದಿತೆಂದು ಕೆಲವರು ಹೇಳುತ್ತಾರೆ. ಇದು ಸಮಂಜಸವಲ್ಲ.

ಈ ಗುಹೆಯ ಹೊರಮಗ್ಗಲಿನ ಎಡಕ್ಕೆ 'ಶ್ರೀಪ್ರಸನ್ನ ಬುದ್ಧಿ' ಮುಂತಾದ ೭-೮ನೆಯ ಶತಮಾನದ ಕೆಲವು ಸಣ್ಣ ಶಾಸನಗಳಿವೆ. ಈ ಗುಹೆಯ ಕಾಲ ಕ್ರಿ. ಶ. ೬ನೆಯ ಶತಮಾನವೆಂದೂ ಮತ್ತು ಇದು ಈ ಊರ ಎಲ್ಲ ಗುಹೆ-ಗಳಲ್ಲಿ ಅತಿ ಪ್ರಾಚೀನವಾದದ್ದೆಂದೂ ಕೆಲವರ ಅಭಿಪ್ರಾಯ. ಇದು ೭-೮

ನೆಯ ಶತಮಾನದಲ್ಲಿ ನಿರ್ಮಿತವಾದದ್ದು ಇದ್ದರೂ ಇರಬಹುದು. ಇದು ಉತ್ತರಕ್ಕೆ ಮುಖ ಮಾಡಿದೆ.

ಈ ಗುಹೆ ಆದಿನಾಥ ತೀರ್ಥಂಕರನ ಬಸದಿ. ಇದರ ಹೊರಗೆ ಎಡ ಅಂದರೆ ಪಶ್ಚಿಮ ಗೋಡೆಯ ಮೇಲೆ, ಪೀಠದ ಮೇಲೆ ಕುಳಿತ ಒಬ್ಬ ತೀರ್ಥಂಕರನ ಮೂರ್ತಿಯನ್ನು ಕಟಿದಿದೆ. ಒಬ್ಬ ಭಕ್ತಳು ( ಜಕ್ಕವ್ವೆ ) ಅವನ ಬಲಗಡೆಗೆ ಕುಳಿತಿರುವಳು. ಈ ಮೂರ್ತಿಯ ಕೆಳಗೆ ೧೨ನೆಯ ಶತಮಾನದ



**ಸುಪಾರ್ಶ್ವನಾಥ, ಬಾದಾವಿ**

ಒಂದು ಕನ್ನಡ ಶಾಸನವಿದೆ. ಇದು ಜಕ್ಕವ್ವೆ ಸಲ್ಲೇಖನ ವ್ರತಮಾಡಿ ಸತ್ತು-ದನ್ನು ಹೇಳುತ್ತದೆ. ಇವಳನ್ನು ಅತ್ತಿಮಬ್ಬೆ ಮೊದಲಾದವರಿಗೆ ಹೋಲಿಸಿದೆ.

ಗುಹೆಯು ಮುಂಜೂರನ್ನು ಯಾಳಿಗಳು ಎತ್ತಿ ಹಿಡಿದಿವೆ. ನೊಗ-ಸಾಲೆಗೆ ಹೋಗಲು ೪ ಕಂಬಗಳಿವೆ. ಅವುಗಳ ಕೆಳಭಾಗದಲ್ಲಿ ಸಿಂಹ-

ಗಳು ಕಂಬಗಳನ್ನು ಹೊತ್ತುಕೊಂಡಂತೆ ಕುಳಿತಿವೆ. ಪಡಸಾಲೆಯ ಪಶ್ಚಿಮ ಗೋಡೆಯ ಮೇಲೆ **ಸುಪಾರ್ಶ್ವನಾಥ**ನ ನಿಂತ ದೊಡ್ಡ ದಿಗಂಬರ ಮೂರ್ತಿಯಿದೆ ( ಚಿತ್ರ ನೋಡಿರಿ ). ಅವನ ಬಲಗಡೆಗೆ ಛತ್ರವನ್ನು ಹಿಡಿದುಕೊಂಡು ಒಬ್ಬ ಯಕ್ಷಿಣಿ ನಿಂತಿದ್ದಾಳೆ. ಎಡಗಡೆಗೆ ಯಕ್ಷನಿದ್ದಾನೆ. ಈ ಮೂರ್ತಿಯ ಹತ್ತಿರವೇ ಒಂದು ಜಿನನ ಮೂರ್ತಿಯಿದೆ. ಮತ್ತು ಅದರ ಹತ್ತರ ೨೮ ಜಿನಬಿಂಬಗಳಿವೆ. ಪೂರ್ವದ ಗೋಡೆಯ ಮೇಲೆ ಸುಪಾರ್ಶ್ವನ ಎದುರಿಗೆ **ಬಾಹುಬಲಿ** ಇರುವನು. ಇವನು ಜಡೆಯನ್ನು ಬೆಳಸಿಕೊಂಡು ಕಮಲದ ಮೇಲೆ ಹಸನ್ಮುಖಿಯಾಗಿ ನಿಂತಿರುವನು. ಮಾಧವೀಲತೆಯು ಅವನ ಕೈ, ಕಾಲುಗಳನ್ನು ಸುತ್ತಿಕೊಂಡಿದೆ. ಪಾದದ ಹತ್ತರ ಭಕ್ತರು ಮತ್ತು ಹಾವು-ಗಳಿವೆ. ಚಾಮರಧಾರಿಗಳೂ ಇಲ್ಲಿದ್ದಾರೆ. ಬಾಹುಬಲಿಯ ಮೂರ್ತಿ ಸುಂದರ-ವಾಗಿದೆ. ಮೇಲೆ ಹೇಳಿದ ಸುಪಾರ್ಶ್ವನ ಹತ್ತರವಿದ್ದಂತೆ ಇಲ್ಲಿಯೂ ತೀರ್ಥಂಕ-ರರ ಕೆಲವು ಬಿಂಬಗಳನ್ನು ಕಟೆದಿದ್ದಾರೆ.

ಮೊಗಸಾಲೆ ಮತ್ತು ಮಂಟಪದ ನಡುವೆ ಎರಡು ಕಂಬಗಳಿವೆ. ಈ ಮಂಟಪದ ಚೌಕಟ್ಟು ಚನ್ನಾಗಿದೆ. ಈ ಕಂಬಗಳ ಮೇಲೆ ಜಿನನ ಮತ್ತು ಯಕ್ಷ, ಯಕ್ಷಿಣಿಯರ ಹಲವು ಮೂರ್ತಿಗಳಿವೆ. ಮಂಟಪದ ಬಲಭಾಗದಲ್ಲಿ ಸುಮಾರು ೭' ಎತ್ತರವಾದ **ಮಹಾವೀರ ತೀರ್ಥಂಕರ**ನ ಮೂರ್ತಿ ನಿಂತಿದೆ. ಅದರ ಕೆಳಗೆ, ಬಲಗಡೆಗೆ, ಆನೆ ವಾಹನವುಳ್ಳ ಮಾತಂಗ ಯಕ್ಷ ಮತ್ತು ಎಡಗಡೆಗೆ ಗರುಡ (?) ವಾಹನವುಳ್ಳ ಸಿದ್ಧಾಯಿನಿ ಯಕ್ಷಿಣಿಯಿದ್ದಾರೆ. ಇವರು ಗಿಡಗಳ ಕೆಳಗೆ ಕುಳಿತಿದ್ದಾರೆ. ಈ ತೀರ್ಥಂಕರನ ಮಗ್ಗಲಲ್ಲಿ ಕೆಲವು ತೀರ್ಥಂಕರರ ಮೂರ್ತಿಗಳಿವೆ. ಗರ್ಭಗುಡಿಯ ಬಲಗಡೆಗೆ, ಕೆಳಭಾಗದಲ್ಲಿ, ಪದ್ಮಾವತಿಯ ಕುಳಿತ ಮೂರ್ತಿಯಿದೆ. ಪದ್ಮಾವತಿಯ ವಾಹನ ಕುಕ್ಕುಟ-ಸರ್ಪವಿರುವದು.

ಗರ್ಭಗುಡಿಯ ಹೊರಗೆ, ಎಡಬದಿಗೆ ನಾಲ್ಕು ತೀರ್ಥಂಕರರ ಮೂರ್ತಿ-ಗಳಿವೆ. ಮಂಟಪದ ಎಡಭಾಗದಲ್ಲಿಯೂ **ಮಹಾವೀರ**ನ ದೊಡ್ಡ ಮೂರ್ತಿ ಇರುವದು.

ಗರ್ಭಗುಡಿಯ ಚೌಕಟ್ಟು ಚನ್ನಾಗಿ ಅಲಂಕೃತವಾಗಿದೆ. ಇಲ್ಲಿ ಇಬ್ಬರು ದ್ವಾರಪಾಲಕರಿರುವರು. ಗರ್ಭಗುಡಿಯಲ್ಲಿ **ಆದಿನಾಥ ತೀರ್ಥಂಕರ**ನು ಸಿಂಹಪೀಠದ ಮೇಲೆ ಲೋಡಿಗೆ ಆತು ಕುಳಿತಿರುವನು. ಅಲ್ಲಿಯೆ ಇದ್ದ

ಸಿಂಹಾಸನದ ಹಿಂಭಾಗದ ಮೇಲೆ ಕೆತ್ತಿದ ಮಕರಗಳನ್ನು ನೋಡಬಹುದು. ಗಂಧರ್ವರು ಚಾಮರವನ್ನು ಬೀಸುತ್ತಿದ್ದಾರೆ. ತೀರ್ಥಂಕರನ ಮೇಲೆ ಮುಕ್ಕೊಡೆ ಮತ್ತು ಗಿಡ ಇವೆ. ವಾಡಿಕೆಯಂತೆ ಗಂಧರ್ವರು ಆಕಾಶದಲ್ಲಿ ತೀರ್ಥಂಕರನ ಕಡೆಗೆ ಮಾಲೆ ಹಿಡಿದುಕೊಂಡು ಬರುತ್ತಿದ್ದಾರೆ.

ಈ ಗುಹೆಯಲ್ಲಿಯಾದರೂ ಇಲ್ಲಿಯ ಉಳಿದ ಗುಹೆಗಳಲ್ಲಿರುವಂತೆ ಕುಬ್ಜ ಮೂರ್ತಿಗಳು ತೊಲೆಗಳನ್ನು ಬೆನ್ನ ಮೇಲೆ ಹೊತ್ತುಕೊಂಡಿವೆ. ನಡುವಿನ ಭಾಗದ ಛತ್ತಿನಲ್ಲಿ ಗಂಧರ್ವ ದಂಪತಿಗಳಿರುವರು. ತೀರ್ಥಂಕರನ ಎದುರಿಗೆ, ಮುಂಜೂರಿನ ಮೇಲೆ ಒಂದು ಗಿಡ್ಡ ಟುಮುಕಾದ ವಿಗ್ರಹವಿರುವದು. ಇದು ಬಹುಶಃ **ಕುಬೇರ**ನದು. ನಾಲ್ಕನೆಯ ಗುಹೆಯಿಂದ, ಕೆಳಗೆ ಇರುವ ವಿಶಾಲವಾದ ಹೊಂಡ, ಭೂತನಾಥಗುಡಿಗಳ ಗುಂಪುಗಳು, ಮಾಲೆಗಿತ್ತಿ ಶಿವಾಲಯ, ಊರು ಮತ್ತು ಉತ್ತರದಿಕ್ಕಿನ ಗುಡ್ಡದಲ್ಲಿರುವ ಎರಡು ಶಿವಾಲಯ ಇತ್ಯಾದಿಗಳನ್ನು ನೋಡಬಹುದು.

## ದತ್ತಾತ್ರೇಯನ ಗುಡಿ

ನಾಲ್ಕನೆಯ ಗುಹೆಯನ್ನು ನೋಡಿಕೊಂಡು ಕೆಳಗೆ ಮರಳಿ ಬಂದರೆ ಬಲಗಡೆಗೆ ಮೊದಲು ಮಸೀದೆ ಹತ್ತುವದು. ಇದು ವಿಜಾಪುರದ ಆದಿಲಶಾಹಿಯ ಕಾಲದ್ದು. ಮುಂದೆ ಹಾಗೆಯೆ ಊರೊಳಗೆ ಹೋದರೆ **ದತ್ತಾತ್ರೇಯ**ನ ಗುಡಿ ಬರುತ್ತದೆ. ಈ ಗುಡಿಯಲ್ಲಿಯ ದತ್ತಾತ್ರೇಯನ ಕುಳಿತ ಮೂರ್ತಿಯು ಬಹಳ ಸುಂದರವಿದೆ. ಈ ದತ್ತಾತ್ರೇಯನಿಗೆ ಒಂದೇ ಮುಖ, ನಾಲ್ಕು ಕೈಗಳಿದ್ದು ಮೇಲಿನ ಎರಡು ಕೈಗಳಲ್ಲಿ ಶಂಖ, ಚಕ್ರಗಳಿವೆ. ಕೆಳಗಿನ ಕೈಗಳು ಧ್ಯಾನಮುದ್ರೆಯಲ್ಲಿವೆ ( ಚಿತ್ರ ನೋಡಿರಿ. ). ದತ್ತಾತ್ರೇಯನು ಅರೆಮುಚ್ಚಿದ ಕಣ್ಣುಗಳಿಂದ ಧ್ಯಾನಸ್ಥನಾಗಿದ್ದಾನೆ. ಪೀಠದ ಮೇಲೆ ಬ್ರಹ್ಮಾ, ಮಹೇಶ್ವರ ಮತ್ತು ವಿಷ್ಣು ಇವರ ವಾಹನಗಳಾದ ಹಂಸ, ನಂದಿ ಮತ್ತು ಗರುಡ ಇವುಗಳನ್ನು ಕೆತ್ತಿದೆ. ತಲೆಯ ಮೇಲೆ ಕಿರೀಟ, ಮೈಮೇಲೆ ಕೆಲವು ಆಭರಣಗಳಿವೆ. ಹಿಂದೆಯಿರುವ ಮಕರತೋರಣದ ಮೇಲೆ ವಿಷ್ಣುವಿನ ದಶಾವತಾರಗಳನ್ನು ತೋರಿಸಿದೆ. ಕರಿಯ ಕಲ್ಲಿನಲ್ಲಿ ಮಾಡಿದ ಈ ಮೂರ್ತಿಯು ಬಹಳ ನುಣುಪಾಗಿದೆ. ಈ ಮೂರ್ತಿಯ ಕಾಲ ಕ್ರಿ. ಶ. ೧೨ ನೆಯ ಶತಮಾನವೆಂದು ಹೇಳಬಹುದು.

ಈ ದತ್ತಾತ್ರೇಯನ ಗುಡಿಯ ಎದುರಿಗೆ **ಎಲ್ಲಮ್ಮ**ನ ೧೧–೧೨ ನೆಯ ಶತಮಾನದ ಕಲ್ಯಾಣೀ ಚಾಲುಕ್ಯ ಶಿಲ್ಪದ ಪ್ರಾಚೀನ ದೇವಾಲಯವಿದೆ. ಇದರ ವಾಸ್ತುಶಿಲ್ಪವನ್ನು ಗಮನಿಸಬಹುದು. ಇದರ ಮುಂಭಾಗ ಬಿದ್ದಿದೆ. ಈ



**ದತ್ತಾತ್ರೇಯ, ಬಾದಾವಿ**

ಗುಡಿಯು, ಹೊಂಡದ ಮೇಲೆ, ಪೂರ್ವಕ್ಕೆ ಮುಖಮಾಡಿ ನಿಂತಿದೆ. ಇದು ಮೊದಲು ಯೋಗೀಶ್ವರನ ದೇವಾಲಯವೆಂದು ಅದರಲ್ಲಿಯ ಕಲ್ಯಾಣದ ಚಾಲುಕ್ಯ ಅರಸನಾದ ಜಗದೇಕಮಲ್ಲನ ಶಾಸನದಿಂದ ತಿಳಿದುಬರುತ್ತದೆ.

## ಮಲ್ಲಿಕಾರ್ಜುನನ ಗುಡಿ

ಹಾಗೆಯೆ ಮುಂದೆ ಉತ್ತರಕ್ಕೆ ಹೋದರೆ ಪ್ರಸನ್ನ ವೆಂಕಟದಾಸರ ಕಟ್ಟೆ ಬರುತ್ತದೆ. ಈ ಸ್ಥಳದಲ್ಲಿ ಕ್ರಿ. ಶ. ೧೭ನೆಯ ಶತಮಾನದಲ್ಲಿ ಆಗಿಹೋದ ವೈಷ್ಣವ ಭಕ್ತರಾದ ಪ್ರಸನ್ನ ವೆಂಕಟದಾಸರು ಕೂಡುತ್ತಿದ್ದರೆಂದು ಹೇಳು-ತ್ತಾರೆ. ಇಲ್ಲಿಂದ ಮುಂದೆ ಒಂದು ಚೌಕಟ್ಟಿನೊಳಗಿಂದ ಹಾದು ಪೂರ್ವಕ್ಕೆ ತುಸು ಹೆಜ್ಜೆ ಹೋದರೆ ಉತ್ತರ ದಿಕ್ಕಿನ ಕೋಟೆಗೆ ಹೋಗುವ ಮಾರ್ಗ, ಪಲ್ಲವ ನರಸಿಂಹವರ್ಮನ ಬಂಡೆಗಲ್ಲು ಶಾಸನ, ಮಲ್ಲಿಕಾರ್ಜುನನ ಗುಡಿ ಹತ್ತುವವು. ಇವೆಲ್ಲವುಗಳು ಹೊಂಡದ ಉತ್ತರ ಭಾಗದಲ್ಲಿವೆ. ನರಸಿಂಹ-ವರ್ಮನ ಶಾಸನದ ವಿಷಯವಾಗಿ, ಮುಂದೆ, ಶಾಸನಗಳು ಎಂಬ ವಿಭಾಗ ನೋಡಿರಿ.

ಮಲ್ಲಿಕಾರ್ಜುನನ ಗುಡಿಯು ಕಲ್ಯಾಣದ ಚಾಲುಕ್ಯ ವಾಸ್ತುಶಿಲ್ಪದ ಮಾದರಿಯದು. ಇದರ ತಳವಿನ್ಯಾಸ ನಕ್ಷತ್ರಾಕೃತಿಯಲ್ಲಿದೆ. ಈ ಗುಡಿಯ ಆವಾರದಲ್ಲಿ ಒಟ್ಟು ಮೂರು ಗುಡಿಗಳಿವೆ. ಒಳಗೆ ಹೋದ ಕೂಡಲೆ ಎಡ ಗಡೆಗೆ ಇರುವದು ಮಲ್ಲಿಕಾರ್ಜುನನ ಗುಡಿ. ಇದಕ್ಕೆ ಮಂಟಪ, ಗರ್ಭಗುಡಿ ಇರುವವು. ಗರ್ಭಗುಡಿಯಲ್ಲಿ ಮಲ್ಲಿಕಾರ್ಜುನನ ಲಿಂಗವಿದೆ. ಕಂಚೆಯ ಚಾವಯ್ಯನು ಈ ಮಲ್ಲಿಕಾರ್ಜುನದೇವರನ್ನು ೧೧ನೆಯ ಶತಮಾನದಲ್ಲಿ ಪ್ರತಿ-ಷ್ಠಿಸಿದ್ದಾನೆ. ಎದುರಿನ ಮೂಲೆಯಲ್ಲಿ ಅಮ್ಮನವರ ದೇವಸ್ಥಾನವಿದೆ. ಅದರ ಎದುರಿಗೆ ವೀರಭದ್ರನ ಸಣ್ಣ ದೇವಾಲಯುವಿರುವದು. ಈ ದೇವಸ್ಥಾನದ ಮುಂದೆ ಮನುಷ್ಯಾಕೃತಿಯ ಎರಡು ಶೈವ ದ್ವಾರಪಾಲಕ ಮೂರ್ತಿಗಳಿವೆ. ಇವುಗಳನ್ನು ನೋಡಬಹುದು. ಮಲ್ಲಿಕಾರ್ಜುನನ ಗುಡಿಯು ಅಗಸ್ತ್ಯ ಪುಷ್ಪಗಿರಿಯಲ್ಲಿದ್ದಿತೆಂದು ಶಾಸನದಿಂದ ಗೊತ್ತಾಗುವದು.

ಮಲ್ಲಿಕಾರ್ಜುನನ ಗುಡಿಯಿಂದ ಮುಂದಕ್ಕೆ ಹೋದರೆ ಎಡಗಡೆಗೆ ಕೋಟೆಯ ಗೋಡೆಗುಂಟ ಒಂದು ಹಾದಿ ಹೋಗುವದು. ಈ ಹಾದಿಯಿಂದ ಮಹಾಕೂಟಕ್ಕೆ ಹೋಗಲು ಬರುತ್ತದೆ. ಇದೇ ಹಾದಿಯಲ್ಲಿ ಎಡಗಡೆಗೆ ಒಂದು ಬಂಡೆಗಲ್ಲ ಮೇಲೆ ಕಪ್ಪೆ ಅರಭಟ್ಟನ ೭ ನೆಯ ಶತಮಾನದ ಶಾಸನ-ವಿದೆ. (ಈ ವಿಷಯವಾಗಿ ಶಾಸನಗಳು ಎಂಬ ವಿಭಾಗ ನೋಡಿರಿ.) ಇಲ್ಲಿಯೆ ಒಂದೆರಡು ಪ್ರಾಚೀನ ಶಾಸನಗಳಿವೆ. ಅವುಗಳಲ್ಲಿ ಒಂದು ಕೆಂಪುಬಣ್ಣದಲ್ಲಿದೆ.

ಹಾಗೆಯೆ ಮುಂದೆ ಹೋದರೆ-**ಬತ್ತೇರಪ್ಪ** ( ಹನುಮಂತದೇವರ ) ನ ಗುಡಿ ಬರುತ್ತದೆ. ಇವನು ಜಾಗೃತ ದೇವರೆಂದು ಹೇಳುತ್ತಾರೆ. ಇದು ಅರ್ವಾ-ಚೀನ ಗುಡಿ. ಇದರ ಹತ್ತರ ಬಲಗಡೆಗೆ, ವಿಜಯನಗರದ ಹರಿಹರನ ಕಾಲದ ಶಾಸನ ಮತ್ತು ಮೇಲ್ಗಡೆಗೆ ೭-೮ನೆಯ ಶತಮಾನದಲ್ಲಿ ಬರೆದ ಸಣ್ಣ ಶಾಸನ-ಗಳಿವೆ.

## ಭೂತನಾಥ ಗುಡಿಗಳ ಗುಂಪು ೧

ಹೋದಮಾರ್ಗದಿಂದ ಕೆಳಗೆ ಬಂದರೆ ಎಡಗಡೆಗೆ ತಟ್ಟುಕೋಟೆಯ ಚಿಕ್ಕಗ್ರಾಮ ಹತ್ತುವದು. ಅಲ್ಲಿಂದ ಹೊಂಡದಗುಂಟ ಪೂರ್ವಕ್ಕೆ ಹೋದರೆ



**ಭೂತನಾಥ ಗುಡಿಗಳ ಗುಂಪು ೧, ಬಾದಾಮಿ**

ಭೂತನಾಥ ಗುಡಿಗಳ ಗುಂಪು ೧ ಹತ್ತುವದು. (ಚಿತ್ರ ನೋಡಿರಿ). ಇದರಲ್ಲಿಯ ದೊಡ್ಡ ಗುಡಿಗೆ, ಮೊದಲು, ಹೊರಗೆ ಒಂದಂಕಣದ ಅರ್ಧಮಂಟಪವಿತ್ತೆಂದು ತೋರುವದು. ಮುಂದೆ ಕೆಲವು ಕಂಬಗಳನ್ನು ಸೇರಿಸಿ ಮಂಟಪವನ್ನು ವಿಸ್ತರಿ-ಸಿದ್ದಾರೆ. ಇದರ ಒಳಗಿನ ಮಂಟಪವು ಮಹಾಕೂಟ ಮತ್ತು ಐಹೊಳೆಯ

ಮಲ್ಲಿಕಾರ್ಜುನನ ಗುಡಿಗಳ ಮಂಟಪದ ರಚನೆಯನ್ನು ಹೋಲುವದು. ಇದರ ಒಂದು ಕಂಬದಮೇಲಿನ ಶಾಸನದಲ್ಲಿ 'ಶ್ರೀಕರಿಯುವದಿಯಮ್ಮನ ಸ್ಥಾನದೀವಿಗೆ' ಎಂದು ಬರೆದಿದೆ. ಗರ್ಭಗುಡಿಯ ಬಾಗಿಲದ ಚೌಕಟ್ಟಿನ ಕೆಳಗೆ ಗಂಗಾ, ಯಮುನೆಯರ ಗೊಂಬೆಗಳಿವೆ. ಅವುಗಳ ಹತ್ತರ ಶೈವ ದ್ವಾರ-ಪಾಲಕರಿರುವರು. ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಈ ಗುಡಿಗೆ ದ್ರಾವಿಡ ಶಿಲ್ಪದ ವಿಮಾನವಿದೆ. ಇದರ ಹೊರ ಗೋಡೆಯ ಮೇಲೆ ೮ನೆಯ ಶತ-ಮಾನದ ಒಂದು ಶಾಸನವಿದೆ. ಅದು ಶ್ರೀ ಪೈಂಗರ ಶ್ರೀಧರಭೂತೇಶ್ವರ ಭಟಾರರಿಗೆ ೮ ಮತ್ತರ ಭೂಮಿಯನ್ನು ಕೊಟ್ಟದ್ದನ್ನು ಹೇಳುತ್ತದೆ.

ಈ ಗುಡಿಯ ಹತ್ತರವಿದ್ದ ಒಂದು ಚಿಕ್ಕ ಗುಡಿಯಲ್ಲಿ ಶೈವ ದ್ವಾರಪಾಲ-ಕರು, ಮಹಿಷಾಸುರಮರ್ದಿನಿ ಮತ್ತು ಗಣಪತಿಯ ಮೂರ್ತಿಗಳಿವೆ. ಗರ್ಭ-ಗುಡಿಯ ಒಳಗೆ ಎದುರಿನ ಗೋಡೆಯ ಮೇಲೆ ಲಿಂಗ, ನಂದಿಗಳಿವೆ. ಇವು-ಗಳನ್ನು ದಂಪತಿಗಳು ಪೂಜಿಸುತ್ತಾರೆ. ಮತ್ತೊಂದು ಗುಡಿಯ ಕಂಬದ ಮೇಲೆ ಒಂದು ಶಾಸನವಿದೆ.

ಈ ಗುಡಿಯ ಹಿಂದೆ ಆಗ್ನೇಯಕ್ಕೆ ೧೦–೧೧ ನೆಯ ಶತಮಾನದ ಗುಡಿ-ಯಿದೆ. ಇದರ ಮಂಟಪವು ನಾಲ್ಕು ದುಂಡುಗಂಬಗಳ ಮೇಲೆ ನಿಂತಿದೆ. ಅದರ ಗರ್ಭಗುಡಿಯಲ್ಲಿ ಬತ್ತಲೆಯಾದ, ಒಡೆದ **ಲಕುಳೀಶನ** ಕುಳಿತ ಮೂರ್ತಿಯನ್ನಿಟ್ಟಿದೆ. ಇದರಿಂದ ಲಾಕುಳ ಪಂಥವು ಈ ಊರಲ್ಲಿ ಪ್ರಚಾರ-ದಲ್ಲಿತ್ತೆಂದು ಗೊತ್ತಾಗುವದು. ಇದೇ ಗುಂಪಿನಲ್ಲಿ ಬೇರೆ ಕೆಲವು ಸಣ್ಣ ಗುಡಿಗಳಿವೆ. ಮೇಲಿನ ಗುಡಿಯ ಹತ್ತಿರವೇ ಆಗ್ನೇಯಕ್ಕೆ ಒಂದು ದೊಡ್ಡ ಬಂಡೆಗಲ್ಲಿದೆ. ಅದರ ಮೇಲೆ ಲಿಂಗಗಳು, ವಿಷ್ಣು, ನರಸಿಂಹ, ಮಹಿಷಾಸುರ-ಮರ್ದಿನಿ, ಶಿವ, ಬ್ರಹ್ಮಾ, ಗಣಪತಿ, ವರಾಹ ಈ ದೇವತೆಗಳನ್ನು ಕಟೆದಿದೆ. ವರಾಹನ ಕೆಳಗೆ ಕೆಲವು ನಾಗಕನ್ನೆಯರು ಕೈಮುಗಿದುಕೊಂಡು ಕುಳಿತಿರು-ವರು. ಇಲ್ಲಿ ಎಂಟನೆಯ ಶತಮಾನದ ಕೆಲವು ಶಾಸನಗಳಿವೆ. ಈ ಬಂಡೆಗಲ್ಲ ಮುಂದೆ, ಅದರ ಮತ್ತೊಂದು ಬದಿಗೆ, ಒಂದು ಸಣ್ಣ ದೇವಾಲಯ ಬರುವದು. ಅದರಲ್ಲಿಯ ಅನಂತಶಯನನ ಮೂರ್ತಿ ಸುಂದರವಿದೆ. ಆ ಮೂರ್ತಿಯ ಮೇಲೆ ವಿಷ್ಣುವಿನ ದಶಾವತಾರಗಳನ್ನು ಕೆತ್ತಿದೆ. ಈ ಗುಡಿಯ ಚೌಕಟ್ಟಿನ ಮೇಲೆ ಕಾಮ, ರತಿಯರ ಮೂರ್ತಿಗಳಿವೆ. ಇಲ್ಲಿಂದ ೨೫' ನ ಮೇಲಿರುವ ಮತ್ತೊಂದು ಬಂಡೆಗಲ್ಲ ಮೇಲೆ ಸೂರ್ಯ, ಗಣಪತಿಗಳ ಸಣ್ಣ ವಿಗ್ರಹಗಳಿ-

ರುವವು. ಈ ಬಂಡೆಗಲ್ಲಿನಿಂದ ತುಸು ಅಂತರದಲ್ಲಿ ಒಂದು ಸ್ವಾಭಾವಿಕ ಗುಹೆ ಬರುವದು. ಅದರಲ್ಲಿ ಒಂದು ದೊಡ್ಡ ಮೂರ್ತಿ ಸಿಂಹಾಸನದ ಮೇಲೆ ಕುಳಿತುದು ಎದುರಿಗೆ ಕಾಣುತ್ತದೆ. ಇದು **ಕೋಷ್ಟರಾಯನ** ಮೂರ್ತಿಯೆಂದೂ ಇವನು ಬಾದಾಮಿಗೆ ಬಂದುದರಿಂದ ಅವನ ಮೈಮೇಲಿನ ಕುಷ್ಟವು ನಾಶವಾಯಿತೆಂದೂ ಹೇಳುತ್ತಾರೆ. ಆದರೆ ಈ ಮೂರ್ತಿ ತನ್ನ ಎಡಗೈಯನ್ನು ಜೈನ ತೀರ್ಥಂಕರನಂತೆ ಅಂಗಾಲುಗಳಮೇಲೆ ಇಟ್ಟುಕೊಂಡಿದೆ ಮತ್ತು ಅದರ ಬಲಗೈಯು ಉಪದೇಶಿಸುವ ಮುದ್ರೆಯಲ್ಲಿದೆ. ಈ ಬಲಗೈಯಲ್ಲಿ ಜಪಮಣಿಯಿದೆ. ಇದೇ ಕಾಲದ ಜೈನ ಮೂರ್ತಿಗಿರುವ ಸಿಂಹಪೀಠ, ಅದರ ಹಿಂಬದಿಗಿರುವ ಮಕರಗಳ ಆನಿಕೆ, ಗಿಡ, ಪ್ರಭಾಮಂಡಲ, ಚೌರೀ ಹಿಡಿದುಕೊಂಡು ಬಾಜುವಿನ ಲ್ಲಿನಿಂತ ಮೂರ್ತಿಮೊದಲಾದವುಗಳು ಇದು ಒಂದು ಜೈನ ವಿಗ್ರಹವೆಂದು ಸೂಚಿಸುವವು. ಈ ಕೋಷ್ಟರಾಯನು ಬಾದಾಮಿಯ ಕೋಟೆಗೆ ಸಂಬಂಧಿಸಿದ ಒಬ್ಬ ಅಧಿಕಾರಿಯಾಗಿದ್ದು ಮುಂದೆ ಅವನು ಸನ್ಯಾಸ ಸ್ವೀಕರಿಸಿರಬಹುದೆ ಎಂಬ ಅನುಮಾನ ಹುಟ್ಟುತ್ತದೆ. ತುಸು ಎಡಕ್ಕೆ ಹೊರಳಿ ಮುಂದೆ ಪೂರ್ವಕ್ಕೆ ಸಾಗಿದರೆ ಬಾದಾಮಿಯ ಊರಿಂದ ಅರ್ಧ ಮೈಲಿನಮೇಲೆ ಅರಳೀತೀರ್ಥ ಬರುವದು. ಅಲ್ಲಿ ಒಂದು ಸಣ್ಣ ನೀರಿನ ಗುಂಡಿ, ಕೆಲವು ಹಿಂದೂ ಮೂರ್ತಿಗಳು ಮತ್ತು **ಕೊಲ್ಲಾಪುರದ ಮಹಾಲಕ್ಷ್ಮಿ**ಯನ್ನು ಉಲ್ಲೇಖಿಸುವ ನಾಗರೀ ಲಿಪಿಯಲ್ಲಿಯ ಶಾಸನ ಇತ್ಯಾದಿ ಬರುತ್ತವೆ. ಹಾರೀತಿಗೋತ್ರದ ರಪಿತ್ರಿದಂಡಿಯನ್ನು ಮೆಚ್ಚಿ ಮಹಾಲಕ್ಷ್ಮಿಯು ಕೊಲ್ಲಾಪುರದಿಂದ ಇಲ್ಲಿಗೆ ಬಂದಳೆಂದು ಈ ಶಾಸನ ಹೇಳುತ್ತದೆ. ಪ್ರವಾಸಿಕರು ಈ ಸ್ಥಳವನ್ನು ನೋಡಲೇಬೇಕೆಂಬ ಮಹತ್ವ ಈ ಸ್ಥಳಕ್ಕಿಲ್ಲ.

## ಭೂತನಾಥ ಗುಡಿಗಳ ಗುಂಪು ೨

ಮತ್ತೆ ಮರಳಿ ಭೂತನಾಥ ಗುಡಿಗಳ ಹತ್ತಿರದಿಂದ ಹೊಂಡವನ್ನು ಎಡಗಡೆಗೆ ಮಾಡಿಕೊಂಡು ಬಂದರೆ ಭೂತನಾಥ ಗುಡಿಯ ಎರಡನೆಯ ಗುಂಪು ಬರುವದು. ಇಲ್ಲಿಯ ದೇವಾಲಯಗಳು ದಕ್ಷಿಣಕ್ಕೆ ಮುಖವಾಗಿವೆ. ಈ ಗುಂಪಿನಲ್ಲಿ ಎರಡು ದೊಡ್ಡವು, ಎರಡು ಸಣ್ಣವು ಹೀಗೆ ಒಟ್ಟು ನಾಲ್ಕು ಗುಡಿಗಳಿವೆ. ಎಲ್ಲಕ್ಕೂ ದೊಡ್ಡ ಗುಡಿಯು ದ್ರಾವಿಡ ವಾಸ್ತು ಶೈಲಿಯಲ್ಲಿದ್ದು ನೆಲದಿಂದ ೮-೧೦ ಫೂಟು ಎತ್ತರದ ಕಟ್ಟೆಯಮೇಲೆ ನಿಂತಿದೆ.

ಈ ಗುಡಿಯ ಹೊರಮಂಟಪಕ್ಕೆ ಮೂರೂ ಬದಿಗೆ ಕೂಡಲು ಕಟ್ಟೆಗಳಿವೆ. ಅವುಗಳಮೇಲೆ ಸಣ್ಣ ಕಂಬಗಳಿವೆ. ಒಳಮಾಳಿಗೆಯಮೇಲೆ ಒಂದು ಕಮಲವಿದೆ. ಸುಕನಾಸಿಯ ದ್ವಾರದ ಚೌಕಟ್ಟು ಜಾಲಂದರಗಳಿಂದ ತಯಾರಿಸಿದೆ. ಗರ್ಭಗುಡಿಯಲ್ಲಿ ಈಗ ಲಿಂಗವಿದೆ. ಆದರೆ ಅದರ ಪೀಠದ ಮೇಲೆ ಗರುಡನಿರುವುದರಿಂದ ಇದು ಮೊದಲು ವೈಷ್ಣವ ದೇವಾಲಯವಿತ್ತೆಂದು ಗೊತ್ತಾಗುವದು. ಈ ಗುಡಿಯ ಕಾಲ ೧೧-೧೨ನೆಯ ಶತಮಾನ. ವಿಮಾನದ ಮುಂಭಾಗಕ್ಕೆ ವಿಷ್ಣುವಿನ ಮೂರ್ತಿಯಿದೆ. ಉಳಿದ ಗುಡಿಗಳು ಸಾದಾಯಿರುತ್ತವೆ.

ಇಲ್ಲಿಂದ ಊರಕಡೆಗೆ ತಿರುಗಿ ಮಲ್ಲಿಕಾರ್ಜುನನ ಗುಡಿಯನ್ನು ದಾಟಿ ಬಂದರೆ ಉತ್ತರದ ಕೋಟೆಯೊಳಗೆ ಪ್ರವೇಶಿಸಲು ಒಂದು ಬಾಗಿಲದ ಚೌಕಟ್ಟು ಬರುವದು. ಅದರೊಳಗೆ ಹೋದರೆ ಕೆಲವು ಅಂತರದಮೇಲೆ ಬಲಗಡೆಗೆ 'ಗುಣಪಾಲನ್' ಮುಂತಾದ ಪ್ರಾಚೀನ ಲಿಪಿಗಳನ್ನು ಬಂಡೆಗಲ್ಲ ಮೇಲೆ ಬರೆದಿದ್ದಾರೆ. ಅದೇ ಸಂದಿಯಲ್ಲಿ ಅದಕ್ಕೂ ಮುಂದೆ ಹೋದರೆ ಗುಡ್ಡಗಳ ನಡುವೆ ಇಕ್ಕಟ್ಟಾದ ದೊಡ್ಡ ಹೊದರಿನಲ್ಲಿ ಸುಮಾರು ೧೫೦' ಎತ್ತರದ ಮೇಲೆ ಶಕ ೪೬೫ ( ಕ್ರಿ.ಶ. ೫೪೩ )ನೆಯ ವರ್ಷದ **ಚಲಿಕ್ಯ ವಲ್ಲಭೇಶ್ವರನ** ಶಾಸನವನ್ನು ಬಂಡೆಗಲ್ಲಮೇಲೆ ಕೆತ್ತಿದೆ. ಇಲ್ಲಿಗೆ ಹೋಗಲು ಸ್ಥಳಿಕ ಮಾರ್ಗದರ್ಶಕರನ್ನು ಕರೆದುಕೊಂಡುಹೋದರೆ ನೆಟ್ಟಗೆ. (ಈ ಶಾಸನದ ವಿಷಯವಾಗಿ ಶಾಸನಗಳು ಎಂಬ ವಿಭಾಗ ನೋಡಿರಿ.)

ಇಲ್ಲಿಂದ ತಿರುಗಿ ಬಂದು ಮೊದಲಿನ ಹಾದಿಗುಂಟ ಗುಡ್ಡದ ಮೇಲೆ ಹೋದರೆ ಎರಡು ಪ್ರಾಚೀನ ಶೈವ ದೇವಾಲಯಗಳು ಬರುವವು. ಅವುಗಳ ಗರ್ಭಗುಡಿಯಲ್ಲಿ ಮೂರ್ತಿಯಿಲ್ಲ. ಒಂದು ಗುಡಿಯ ಹೊರಮುಗ್ಗಲು ಗೋವರ್ಧನಧಾರಿಯ (ಕೃಷ್ಣನ) ಮೂರ್ತಿ ಇರುವದು. ಈ ಗುಡ್ಡದ ಮೇಲೆ ವಿಜಯನಗರ ಕಾಲದ ಕೋಟೆಯ ಗೋಡೆಗಳನ್ನು ನೋಡಬಹುದು. ಇಲ್ಲಿ ಖಜಾನಿ ಇತ್ತೆಂದೂ ತೋರಿಸುತ್ತಾರೆ.

## ಮಾಲೆಗಿತ್ತಿ ಶಿವಾಲಯ

ಈ ಹಾದಿಯಿಂದ ತಿರುಗಿ ಬಂದು ಹನುಮಂತದೇವರ ಗುಡಿಯ ಹತ್ತಿರದ ಮಾರ್ಗದಿಂದ ಉತ್ತರದ ಕಡೆಗೆ ಹೋದರೆ ಮಾಲೆಗಿತ್ತಿ ಶಿವಾಲಯ ಬರುವದು. ( ಚಿತ್ರ ನೋಡಿರಿ. ) ಅದು ಒಂದು ದೊಡ್ಡ ಬಂಡೆಗಲ್ಲ ಮೇಲೆ ಪೂರ್ವಕ್ಕೆ

ಮುಖಮಾಡಿಕೊಂಡು ನಿಂತಿದೆ. ಅದನ್ನು ಹೊಡೆದಕಲ್ಲುಗಳಿಂದ ಕಟ್ಟಿದ್ದಾರೆ. ಈ ದೇವಾಲಯಕ್ಕೆ ಒಂದು ಅರ್ಧಮಂಟಪ, ಮಂಟಪ ಮತ್ತು ಗರ್ಭಗುಡಿ



**ಮಾಲೆಗಿತ್ತಿ ಶಿವಾಲಯ, ಬಾದಾವಿ**

ಹೀಗೆ ಭಾಗಗಳಿವೆ. ಅರ್ಧಮಂಟಪದ ಒಂದು ಕಂಬದ ಮೇಲೆ ವಿಜಯ-ನಗರದ ಸದಾಶಿವರಾಯನ ಕಾಲದಲ್ಲಿ ಕೃಷ್ಣಪ್ಪನಾಯಕನು ಕೊತ್ತಳ ಕಟ್ಟಿಸಿ-ದನೆಂದು ಬರೆದಿದೆ. ಮಂಟಪಕ್ಕೆ ಹೋಗುವ ಬಾಗಿಲದ ಬಲಗಡೆ ಇರುವ ಶಾಸನದಿಂದ ಈ ದೇವಾಲಯವನ್ನು ಆರ್ಯಮಿಂಚಿ ಉಪಾಧ್ಯಾಯನೆಂಬ-ವನು ಕಟ್ಟಿದನೆಂದು ಗೊತ್ತಾಗುವದು. ಗುಡಿಯ ಹೊರಗಿನ ದಕ್ಷಿಣ ಗೋಡೆಯ ಮೇಲೆ **ಶಿವ** ಮತ್ತು ಉತ್ತರದ ಗೋಡೆಯ ಮೇಲೆ **ವಿಷ್ಣು**ವಿನ ಮೂರ್ತಿಗಳಿವೆ. ಈ ಶಿವನ ಹತ್ತರ ಮೀಸೆಯುಳ್ಳ ಒಬ್ಬ ಭಕ್ತನು ನಿಂತಿ-ದ್ದಾನೆ. ಈ ರೀತಿ ಮೀಸೆಯಿದ್ದ ಮೂರ್ತಿಗಳು ಕಡಿಮೆ. ಪೂರ್ವದ ಗೋಡೆಯಮೇಲೆಯಿದ್ದ ಎರಡು ದೊಡ್ಡ ಮೂರ್ತಿಗಳು ದ್ವಾರಪಾಲಕರವೆಂದು ತೋರುತ್ತದೆ. ಇವು ಹಸನ್ಮುಖಿಗಳಾಗಿವೆ. ಈ ಗುಡಿಯ ಪೂರ್ವ, ಉತ್ತರ ಮತ್ತು ದಕ್ಷಿಣದ ಹೊರ ಗೋಡೆಗಳ ಮೇಲೆ **ಕುಬ್ಜಮೂರ್ತಿ**ಗಳನ್ನು

ಅಂದವಾಗಿ ಕೆತ್ತಿದ್ದಾರೆ. ಇವುಗಳಲ್ಲಿ ಮುಂದೆ ಹೇಳುವ ಮೂರ್ತಿಗಳನ್ನು ಗಮನಿಸಬಹುದು :— (೧) ತಲೆಯ ಮೇಲೆ ಒಂದು ವಸ್ತುವನ್ನು ಹೊತ್ತು ಕೊಂಡ ಮೂರ್ತಿ (೨) ನಗುಮುಖದಿಂದ ಡೊಳ್ಳು ಬಾರಿಸುತ್ತಿರುವ ಕುಬ್ಜ (೩) ತಂತುವಾದ್ಯ ಬಾರಿಸುವವ (೪) ಕುಸ್ತೀ ಹಿಡಿದವರು (೫) ಘಟ-ವಾದ್ಯ ಬಾರಿಸುವವ (೬) ಹಾವಿನೊಡನೆ ಚೇಷ್ಟೆ ಮಾಡುವ ಮೂರ್ತಿ ಇತ್ಯಾದಿ.

ಈ ಕುಬ್ಜ ಮೂರ್ತಿಗಳ ಪಟ್ಟಿಕೆಗಳ ಹತ್ತರದ ಕಿಂಡಿಗಳಲ್ಲಿ ಮನುಷ್ಯನ ಮುಖಗಳುಂಟು. ಅರ್ಧಮಂಟಪದ ಕೆಳಗೆ ಸಿಂಹ, ಆನೆಗಳು ಗುಡಿಯನ್ನು ಹೊತ್ತುಕೊಂಡಂತೆ ತೋರಿಸಿದೆ. ಈ ಗುಡಿಗೆ ಜಾಲಂದ್ರಗಳಿವೆ. ದೊಡ್ಡ ಮೂರ್ತಿಗಳ ಮೇಲ್ಗಡೆಗೆ ನಿರ್ಮಿಸಿದ ಮಕರ ತೋರಣಗಳು ಸುಂದರವಾಗಿವೆ.

ಗರ್ಭಗುಡಿಯ ಬಾಗಿಲದ ಚೌಕಟ್ಟಿನ ಮೇಲೆ ಉತ್ತಮವಾದ ನಕ್ಷೆ-ಗಳನ್ನು ಕೆತ್ತಿರುವರು. ಮೇಲೆ ಆ ಚೌಕಟ್ಟಿನ ಮಧ್ಯದಲ್ಲಿ ಗರುಡನು ಹಾವಿನ ಬಾಲವನ್ನು ತನ್ನ ಎರಡೂ ಕೈಗಳಲ್ಲಿ ಹಿಡಿದುಕೊಂಡು ಹಾರುತ್ತಿದ್ದಂತೆ ತೋರಿ-ಸಿದೆ. ಇಲ್ಲಿಯೆ ಕೆಳಗೆ ಕಾಮ, ರತಿಯರ ಗೊಂಬೆಗಳಿವೆ. ಗರ್ಭಗುಡಿಯ ಹತ್ತರದ ಬಲ ಸಂದಿಯಲ್ಲಿ ಖಡ್ಗ ಅಥವಾ ಗದೆಯನ್ನು ಹಿಡಿದುಕೊಂಡು ಒಬ್ಬನು ನಿಂತಿದ್ದಾನೆ. ಅವನ ಎಡಗಡೆಗೆ ಒಂದು ಕಿನ್ನರಿಯ ವಿಗ್ರಹ—ಕಾಲುಗಳು ಕುದುರೆಯವು ಮತ್ತು ದೇಹ ಮನುಷ್ಯನದು ಇದ್ದುದು—ಇರು ತ್ತದೆ. ಇದು ಕತ್ತಲೆಯಲ್ಲಿರುವುದರಿಂದ ವಿಶೇಷ ಲಕ್ಷ್ಯಗೊಟ್ಟು ನೋಡಿದರೆ ಕಾಣುತ್ತದೆ. ಗರ್ಭಗುಡಿಯಲ್ಲಿ ಲಿಂಗವಿದೆ. ಮಂಟಪದ ಛತ್ತಿನ ಮೇಲೆ ವಿಷ್ಣು ಇರುವನು. ಈ ಮಾಲೆಗಿತ್ತಿ ಶಿವಾಲಯದ ಕಾಲ ಕ್ರಿ. ಶ. ೮ ನೆಯ ಶತಮಾನವೆಂದು ಹೇಳಬಹುದು. ಪ್ರತ್ಯೇಕವಾಗಿ ಈ ಊರಲ್ಲಿ ಕಟ್ಟಲ್ಪಟ್ಟ ಗುಡಿಗಳಲ್ಲಿ ಇದು ಕಲಾದೃಷ್ಟಿಯಿಂದ ಮಹತ್ವದ್ದಾಗಿದೆ.

## ಜಂಬುಲಿಂಗನ ಗುಡಿ

ಮಾಲೆಗಿತ್ತಿ ಶಿವಾಲಯದಿಂದ ಪೇಟೆಯ ಕಡೆಗೆ ಬಂದರೆ ಹೊಂಡದ ಕಡೆಗೆ ಹೋಗುವ ರಸ್ತೆಯ ಬಲಭಾಗದ ಒಂದು ಸಂದಿಯಲ್ಲಿ ಚಲುಕ್ಯ ವಿಜಯಾದಿತ್ಯನ ಕಾಲದ ( ಕ್ರಿ. ಶ. ೬೯೬–೭೩೩ ) ಒಂದು ಪ್ರಾಚೀನ ಗುಡಿ ಬರುತ್ತದೆ. ಇದರಲ್ಲಿ ಬ್ರಹ್ಮಾ, ವಿಷ್ಣು, ಮಹೇಶ್ವರ ಇವರ ಪ್ರತ್ಯೇಕವಾದ

ಮೂರು ಗರ್ಭಗುಡಿಗಳಿವೆ. ಚೌಕಟ್ಟುಗಳ ಮೇಲೆ ನಾಗಗಳ ಬಾಲವನ್ನು ಹಿಡಿದುಕೊಂಡ ಗರುಡನ ಮೂರ್ತಿ ಇರುವದು. ಇದರಿಂದ ಬಾದಾವಿಯ ಚಲುಕ್ಯರು ತಾವು ವಿಷ್ಣುಭಕ್ತರಾಗಿದ್ದರೂ ಬ್ರಹ್ಮಾ, ವಿಷ್ಣು, ಮಹೇಶ್ವರ ಈ ಮೂರೂ ದೇವತೆಗಳನ್ನು ಭೇದಭಾವವಿಲ್ಲದೆ ಪೂಜಿಸುತ್ತಿದ್ದರೆಂದು ಗೊತ್ತಾಗುವದು. ಇಲ್ಲಿಯ ಕಂಬಗಳ ಮೇಲೆ ಮೂರು ಪ್ರಾಚೀನ ಶಾಸನ-ಗಳಿವೆ. ಅವುಗಳಲ್ಲಿ ಒಂದು ಲಿಪಿಯು ವಿಜಯಾದಿತ್ಯ ಸತ್ಯಾಶ್ರಯನ ತಾಯಿ-ಯಾದ ವಿನಯವತಿಯು ೧೪ ವಿದ್ಯೆಗಳಲ್ಲಿ ಪಾರಂಗತರಾದ ಸಾವಿರಾರು ಬ್ರಾಹ್ಮಣರಿದ್ದ ವಾತಾಪಿ (ಬಾದಾವಿ) ಯಲ್ಲಿ ಮೇಲೆ ಹೇಳಿದ ಬ್ರಹ್ಮಾ ಇತ್ಯಾದಿ ಮೂರು ದೇವತೆಗಳನ್ನು ಪ್ರತಿಷ್ಠಿಸಿದಳೆಂದು ಹೇಳುತ್ತದೆ. ಇದೇ ಗುಡಿಗೆ ಕೆಲವು ಸುಂಕಗಳನ್ನು ಬಿಟ್ಟಿದೆ. ಈ ಗುಡಿಗೆ ಇಟ್ಟಿಗೆಯಿಂದ ಕಟ್ಟಿದ ವಿಮಾನವಿದೆ.

## ವಿರೂಪಾಕ್ಷನ ಗುಡಿ

ಈ ಗುಡಿಯ ಹತ್ತಿರವೇ ವಿರೂಪಾಕ್ಷದೇವರ ಗುಡಿಯಿದೆ. ಇದನ್ನು ೧೧-೧೨ ನೆಯ ಶತಮಾನದಲ್ಲಿ ಕಟ್ಟಿದಂತೆ ಅದರ ವಾಸ್ತುಶಿಲ್ಪ ರಚನೆಯಿಂದ ಗೊತ್ತಾಗುವದು. ಗರ್ಭಗುಡಿಯಲ್ಲಿ ವಿರೂಪಾಕ್ಷಲಿಂಗವಿರುವದು.

## ೨. ಶಾಸನಗಳು

ಬಾದಾವಿಯಲ್ಲಿ ಸುಮಾರು ೨೫೦ ಸಣ್ಣ ದೊಡ್ಡ ಶಾಸನಗಳಿವೆ. ಈ ಊರಿಗೆ ಹಿಂದೆ ಬಂದವರಲ್ಲಿ ಕೆಲವರು ತಮ್ಮ ತಮ್ಮ ಹೆಸರುಗಳನ್ನು ಬಂಡೆ-ಗಲ್ಲುಗಳ ಮೇಲೆ ಬರೆಯಿಸಿದ್ದಾರೆ. ಇವುಗಳಲ್ಲಿ ಗುಹೆಗಳ ಹತ್ತರ ಬರೆದವು-ಗಳೇ ಬಹಳ. ಈ ಶಾಸನಗಳು ಕ್ರಿ. ಶ. ೫೪೩ ರಿಂದ ಪ್ರಾರಂಭವಾಡಿ ೧೬-೧೭ ನೆಯ ಶತಮಾನದ ವರೆಗೂ ದೊರೆಯುತ್ತವೆ. ಇವುಗಳಲ್ಲಿಯ ಮಹತ್ವವಾದ ಶಾಸನಗಳನ್ನು ಇಲ್ಲಿ ಕೊಟ್ಟಿದೆ:–

### ೧. ಚಲಿಕ್ಯ ವಲ್ಲಭೇಶ್ವರನ ಶಾಸನ

ಶಕ ೪೬೫ ( ಕ್ರಿ. ಶ. ೫೪೩ ) ರಲ್ಲಿ ಶ್ರುತಿಗಳಲ್ಲಿ ಹೇಳಿದ ಪ್ರಕಾರ ಅಶ್ವ-ಮೇಧ ಮೊದಲಾದ ಯಾಗಗಳನ್ನು ಮಾಡಿದ, ಹಿರಣ್ಯಗರ್ಭನಿಂದ ಲೋಕಾಭಿ-

ವೃದ್ಧಿಗಾಗಿ ಹುಟ್ಟಿದ ಮತ್ತು ವಲ್ಲಭೇಶ್ವರನಾದ ಚಲಿಕ್ಯರಾಜನು ವಾತಾಪಿಯ ಉತ್ತಮವಾದ ದುರ್ಗವನ್ನು ಮೇಲಿನಿಂದಲೂ ಕೆಳಗಿನಿಂದಲೂ ಭೇದಿಸಲು ದುರ್ಗಮವಾಗುವಂತೆ ಮಾಡಿದನೆಂದು ಇದರಲ್ಲಿ ಹೇಳಿದೆ. ಇದನ್ನು ಸಂಸ್ಕೃತ ಭಾಷೆಯಲ್ಲಿ ಅನುಷ್ಟುಪ್ ಪದ್ಯರೂಪದಲ್ಲಿ ಬರೆದಿದೆ. ಇಲ್ಲಿ ಉಕ್ತನಾದ ಅರಸನು ೧ನೆಯ ಪುಲಿಕೇಶಿಯೆಂದೂ ಮತ್ತು ಅವನು (ಉತ್ತರ ದಿಕ್ಕಿನ ಗುಡ್ಡದ ಮೇಲಿರುವ) ಕೋಟೆಯನ್ನು ಭದ್ರಪಡಿಸಿದನೆಂದೂ ಗೊತ್ತಾಗುವದು. ಶಕ ವರ್ಷವನ್ನು ಹೇಳುವ ಭಾರತದ ಎಲ್ಲ ಶಾಸನಗಳಲ್ಲಿ ಇದು ಅತ್ಯಂತ ಪ್ರಾಚೀನವಾದದ್ದು. (ಪುಟ ೩೪ ನೋಡಿರಿ).

## ೨. ಪಲ್ಲವ ನರಸಿಂಹವರ್ಮನ ಶಾಸನ

ಇದು ನರಸಿಂಹವರ್ಮನ ೧೩ ನೆಯ ರಾಜ್ಯವರ್ಷದಲ್ಲಿ ರಚಿತವಾಗಿದೆ. ಇದರಲ್ಲಿ ಅವನ ಬಿರುದು ಮಹಾಮಲ್ಲ ಎಂದು ಬಂದಿದೆ. ನರಸಿಂಹವರ್ಮನು ಕ್ರಿ. ಶ. ೬೪೨ ರಲ್ಲಿ ಬಾದಾಮಿಯನ್ನು ಚಲುಕ್ಯರಿಂದ ಗೆದ್ದುಕೊಂಡು ಈ ಶಾಸನವನ್ನು ಬರೆಯಿಸಿದ್ದಾನೆ. ಕಾಂಚಿಯ ಪಲ್ಲವರು ಬಾದಾಮಿಯನ್ನು ಕೆಲವು ಕಾಲ ಆಕ್ರಮಿಸಿದ್ದರೆಂದು ಇದರಿಂದ ಗೊತ್ತಾಗುವದು. ಈ ಶಾಸನ ಸಂಸ್ಕೃತದಲ್ಲಿದೆ. ಇದರ ಅಕ್ಷರಗಳನ್ನು ಬರೆದ ಪದ್ಧತಿ ತುಸು ಬೇರೆಯಾಗಿದೆ. (ಪುಟ ೩೦ ನೋಡಿರಿ)

## ೩. ಮಂಗಲೇಶನ ಶಾಸನಗಳು

ಮೂರನೆಯ ಗುಹೆಯಲ್ಲಿ ಅರ್ಧಕಂಬದ ಮೇಲಿರುವ ಶಾಸನದಿಂದ ಮಂಗಲೇಶನು ತನ್ನ ಅಣ್ಣನಾದ ಕೀರ್ತಿವರ್ಮನ ೧೨ ನೆಯ ವರ್ಷದ ಆಳಿಕೆ. ಯಲ್ಲಿ ವಿಷ್ಣುಗುಹೆಯನ್ನು ಕಡಿಸಿ ಅದರಲ್ಲಿ ವಿಷ್ಣುವಿನ ಮೂರ್ತಿಯನ್ನು ಸ್ಥಾಪಿಸಿದನೆಂದು ಮತ್ತು ಆ ಗುಡಿಗೆ ಲಂಜೀಶ್ವರ ಎಂಬ ಗ್ರಾಮವನ್ನು ದತ್ತೀ- ಕೊಟ್ಟನೆಂದು ಗೊತ್ತಾಗುವದು. ಈ ಶಾಸನದ ಕಾಲ ಶಕ ವರುಷ ೫೦೦ (ಕ್ರಿ. ಶ. ೫೭೮). ಇದೇ ಊರಲ್ಲಿಯ ಶಕ ೪೬೫ ರ ಶಾಸನವು ಸಿಗುವ ಮೊದಲು ಭಾರತದಲ್ಲಿ ಶಕವರ್ಷವನ್ನು ಉಲ್ಲೇಖಿಸುವ ಅತಿ ಪ್ರಾಚೀನ ಲೇಖ ಇದೇಯೆಂದು ಪರಿಗಣಿಸಲಾಗಿತ್ತು.

ಅದೇ ಗುಹೆಯ ಮುಂಭಾಗದಲ್ಲಿ ಮಂಗಳೇಶನ ಒಂದು ಕನ್ನಡ ಶಾಸನ- ವಿದೆ. ಮಂಗಲೇಶನು ನಿರ್ಮಿಸಿದ ಕಲ್ಮನೆಯಲ್ಲಿಯ (೩ನೆಯ ಗುಹೆಯ)

ವಿಷ್ಣುದೇವರ ಪೂಜೆಗೆ ಮಾಲೆಗಳನ್ನು ಮಾಡಿಕೊಡುವ ಮಾಲೆಕಾರರಿಗೆ ತಾನು ಮೊದಲು ದಾನವಾಗಿ ಕೊಟ್ಟ ಲಂಜಿಗೇಸರ (ನಂದಿಕೇಶ್ವರ) ಊರಲ್ಲಿ ಅರ್ಧವೀಸ ಪ್ರಮಾಣದ ಆಯುವನ್ನು ಕೊಟ್ಟನೆಂದು ಹೇಳಿದೆ. ಸುಮಾರು ಕ್ರಿ. ಶ. ೪೫೦ ನೆಯ ಕಾಲದ ಹಲ್ಮಿಡಿಯ ಕನ್ನಡ ಶಾಸನ ದೊರೆಯುವ ಮೊದಲು ಇದೇ ಎಲ್ಲಕ್ಕೂ ಮೊದಲನೆಯ ಕನ್ನಡ ಶಾಸನವಾಗಿತ್ತು. ( ಪುಟ ೨೪ ನೋಡಿರಿ )

## ೪. ಕಪ್ಪೆ ಅರಭಟ್ಟನ ಶಾಸನ

ಶಿಷ್ಟರಿಗೆ ಪ್ರಿಯನು ದುಷ್ಟಜನರಿಂದ ದೂರವಿದ್ದವನು ಆದ ಕಪ್ಪೆ ಅರ-ಭಟ್ಟನನ್ನು ಕುರಿತು ಈ ಶಾಸನವು ಹೇಳುತ್ತದೆ. ಅವನು ಕಲಿಯುಗಕ್ಕೆ ವಿಪರೀತನಾಗಿದ್ದನು. ಮಾನಭಂಗಕ್ಕಿಂತ ಸಾವು ಲೇಸೆಂದು ಅವನ ಅಭಿ-ಪ್ರಾಯವಾಗಿತ್ತು. ಇವನು ಸಾಧು ಜನರಿಗೆ ಸಾಧು, ಸವಿ ಮಾತಾಡುವವ-ರಿಗೆ ಸವಿ ಮಾತಾಡುವವನು, ಮತ್ತು ತೊಂದರೆ ಕೊಡುವವರಿಗೆ ಶತ್ರುವಾಗಿ-ದ್ದನು. ಇವನನ್ನು ಕೆಣಕಿದವರು ಸಿಂಹವನ್ನು ಕೆಣಕಿ ಸತ್ತಂತೆ ಆಗುತ್ತಿದ್ದ-ರೆಂದು ಹೇಳಿದೆ. ತ್ರಿಪದಿಯ ಛಂದಸ್ಸು ಕನ್ನಡದಲ್ಲಿ ಲಿಖಿತ ರೂಪವಾಗಿ ದೊರೆತದ್ದು ಇಲ್ಲಿಯೇ ಮೊದಲು. ಈ ಶಾಸನದ ಕಾಲ ಸುಮಾರು ಕ್ರಿ. ಶ. ೭೦೦. ( ಪುಟ ೩೦ ನೋಡಿರಿ )

## ೩. ವಾಸ್ತುಶಿಲ್ಪ

ಕರ್ನಾಟಕದೊಳಗಿನ ಮನುಷ್ಯನಿರ್ಮಿತ ಗುಹೆಗಳಲ್ಲಿ ಬಾದಾಮಿಯ ಗುಹೆಗಳು ಬಹುಪ್ರಾಚೀನವಾದವು ಮತ್ತು ಪ್ರಸಿದ್ಧವಾದವೆಂದು ಈ ಮೊದಲೇ ಹೇಳಿದ್ದೇವೆ. ಇವುಗಳ ವಾಸ್ತು ರಚನೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಇವು ಕಟ್ಟಿಗೆಯ ಕಟ್ಟಡಗಳ ರಚನೆಯನ್ನು ಹೋಲುತ್ತವೆಂ-ಬುದು ಸ್ಪಷ್ಟವಾಗುತ್ತದೆ. ಈ ವಿಷಯವಾಗಿ ಇವುಗಳ ಮುಂಜೂರು ಇತ್ಯಾದಿ ಭಾಗಗಳನ್ನು ನೋಡಬಹುದು. ನಾವು ಇದರ ಬಗೆಗೆ ಗುಹೆಗಳ ಮಾಹಿತಿ-ಯನ್ನು ಮಾಡಿಕೊಡುವಾಗ ಹೇಳಿದ್ದೇವೆ. ಈ ಗುಹೆಗಳನ್ನು ಕೊರೆಯುವ ಪದ್ಧತಿ ಕಟ್ಟಿಗೆ ಅಥವಾ ಕಲ್ಲಿನ ಕಟ್ಟಡಗಳ ವಾಸ್ತು ಶಿಲ್ಪಕ್ಕಿಂತ ಬೇರೆಯಾ-ಗಿತ್ತು. ಇವುಗಳ ನಕ್ಷೆಯನ್ನು ಮೊದಲೇ ರಚಿಸಿಕೊಂಡು ಮೇಲಿನಿಂದ ಕೆಳಗೆ

ಕಡಿಯುತ್ತ ಬರುತ್ತಿದ್ದರು. ಗುಡ್ಡಗಳನ್ನು ಕಡಿದು ಅಲ್ಲಿಯ ಗೋಡೆ, ಕಂಬ, ಮೂರ್ತಿಗಳಿಗೆ ಸುಂದರರೂಪ ಕೊಟ್ಟದನ್ನು ನೋಡಿದರೆ ಈ ಗುಹೆಗಳನ್ನು ನಿರ್ಮಿಸಿದವರ ಸಾಧನ ಸಾಹಿತ್ಯ, ಅಸಾಧಾರಣ ಬುದ್ಧಿ, ಶಕ್ತಿ, ತಾಳ್ಮೆ, ಕಲಾಪ್ರೇಮ, ಸಂಪತ್ತು ಎಷ್ಟಿತ್ತೆಂಬುದು ಗೊತ್ತಾಗುವದು.

## ೪. ಮೂರ್ತಿಶಿಲ್ಪ

ಮೂರ್ತಿಗಳನ್ನು ಅವುಗಳ ಬದಿಗಿರುವ ಭಾಗಗಳನ್ನು ಕಡಿದುತೆಗೆದು ಅವು ಉಬ್ಬಿ ಕಾಣುವಂತೆ ನಿರ್ಮಿಸಿದ್ದಾರೆ. ಇವು ಗೋಡೆಯ ಹತ್ತರ ಸ್ವಾಭಾವಿಕವಾಗಿ ನಿಂತಂತೆ ಭಾಸವಾಗುವದು. ಇವುಗಳನ್ನು ರಚಿಸುವಾಗ ಯೋಗ್ಯ ದಕ್ಷತೆ ವಹಿಸಿದ್ದಾರೆ. ಇಲ್ಲದಿದ್ದರೆ ಇಡೀ ಮೂರ್ತಿ ಅಥವಾ ಅದರ ಹತ್ತರದ ಭಾಗವು ಕೆಟ್ಟುಹೋಗುತ್ತಿತ್ತು. ಏಕೆಂದರೆ ಕಲ್ಲಿನ ಗುಹೆಗಳಲ್ಲಿಯ ಮೂರ್ತಿಗಳು ಅಲಕ್ಷ್ಯತನದಿಂದ ಕೆಟ್ಟುಹೋದರೆ ಅವುಗಳನ್ನು ತಿದ್ದಲು ಅಥವಾ ಬೇರೆ ಮೂರ್ತಿಗಳನ್ನು ತಂದಿಡಲು ಅಸಾಧ್ಯವಿತ್ತು.

ಬಾದಾವಿಯ ಮೂರ್ತಿಗಳು ಭವ್ಯವಾಗಿವೆ. ಅವುಗಳನ್ನು ನಿಶ್ಚಿತ ರೇಖೆಗಳನ್ನು ಹಾಕಿ ನಿರ್ಮಿಸಿದ್ದಾರೆ. ಈ ಮೂರ್ತಿಗಳಿಗೆ ಹರವಾದ ಮುಖ, ತುಸು ಚಪ್ಪಟೆಯಾದ ಮೂಗು, ದಪ್ಪವಾದ ತುಟಿಗಳಿವೆ. ಈ ಮೂರ್ತಿಗಳ ಮುಖದ ಮೇಲಿನ ಗಾಂಭೀರ್ಯ, ಅಂತರ್ದೃಷ್ಟಿ, ತನ್ಮಯತೆ ಮೊದಲಾದವುಗಳು ಈ ಸ್ಥೂಲಕಾಯದ ಮೂರ್ತಿಗಳಿಗೆ ಅನುಗುಣವಾಗಿವೆ. ಮೊದಲನೆಯ ಗುಹೆಯ ಮುಂದಿನ ನಟರಾಜನ ನಗುಮುಖ, ಮೂರನೆಯ ಗುಹೆಯಲ್ಲಿಯ ನರಸಿಂಹನ ತೀಕ್ಷ್ಣ ದೃಷ್ಟಿ, ಇದೇ ಗುಹೆಯಲ್ಲಿಯ ತ್ರಿವಿಕ್ರಮನ ದೃಢತೆ ಮತ್ತು ರಭಸ, ಶೇಷನ ಮೇಲೆ ಕುಳಿತ ವಿಷ್ಣು ಮತ್ತು ಹರಿಹರರ ಗಾಂಭೀರ್ಯ ಜನರ ಮನಸ್ಸನ್ನು ತಮ್ಮೆಡೆಗೆ ಸೆಳೆಯುತ್ತವೆ. ಇಲ್ಲಿಯ ದೊಡ್ಡ ಮೂರ್ತಿಗಳು ಚನ್ನಾಗಿ ಮೈತುಂಬಿಕೊಂಡು ದುಂಡುದುಂಡಾಗಿವೆ. ಅವುಗಳಲ್ಲಿಯ ಅಂತಃಸತ್ವ ಎದ್ದುಕಾಣುತ್ತದೆ. ಮುಖ್ಯ ವಿಗ್ರಹಗಳ ಹತ್ತರವಿದ್ದ ಮೂರ್ತಿಗಳು ದೊಡ್ಡ ಮೂರ್ತಿಗಳ ಪ್ರಭಾವದಲ್ಲಿ ಅಲ್ಪಸ್ಥಾನವನ್ನು ಹೊಂದಿವೆ. ೩ನೆಯ ಗುಹೆಯ ಮುವನಕ್ಕೈ ವಿಗ್ರಹಗಳು ಶ್ರೇಷ್ಠಮೂರ್ತಿಶಿಲ್ಪದ ಕುರುಹುಗಳಾಗಿವೆ. ಅವುಗಳನ್ನು ಬೇರೆ ಬೇರೆ ಪ್ರಕಾರದ ಹಾವಭಾವದಲ್ಲಿ ಶಿಲ್ಪಿಗರು ಮೂಡಿಸಿದ್ದಾರೆ. ಈ

ಮೂರ್ತಿಗಳ ಸಹಾಯದಿಂದ ಪ್ರಾಚೀನ ಚಲುಕ್ಯರ ಕಾಲದ ಮೂರ್ತಿಶಿಲ್ಪ ಕಲೆ ಮತ್ತು ಆಗಿನ ಜನರ ಉಡುಪುತೊಡಪುಗಳನ್ನು ಕಣ್ಣಾರೆ ನೋಡ-ಬಹುದು. ಆಗಿನ ಕಾಲದ ಜನಜೀವನದ ಬಹುಭಾಗ ಈ ಮೂರ್ತಿಗಳಲ್ಲಿ ಪ್ರತಿಬಿಂಬಿತವಾಗಿದೆ.

## ೫. ವರ್ಣಚಿತ್ರಗಳು

ಬಾದಾವಿಯ ೩ ನೆಯ ಗುಹೆಯ ಮುಂಜೂರಿನ ಒಳಮಗ್ಗಲು ಮತ್ತು ತುಸು ಮಟ್ಟಿಗೆ ೨ ನೆಯ ಗುಹೆಯಲ್ಲಿಯೂ ವರ್ಣಚಿತ್ರಗಳಿವೆ. ಕಲ್ಲಿಗೆ ಶಗಣಿ, ಸುಣ್ಣ, ಹುಲ್ಲು ಇವುಗಳ ಲೇಪ ಬಳೆದು ಹಿನ್ನೆಲೆಯನ್ನು ತಯಾರಿಸು-ತ್ತಿದ್ದರು. ಇದೇ ತರಹದ ಹಿನ್ನೆಲೆ ಅಜಂತಾದ ವರ್ಣಚಿತ್ರಗಳಿಗೂ ಇದೆ. 'ಈ ಊರಿನ ಚಿತ್ರಗಳು ಹೆಚ್ಚುನಯವಾಗಿ ಸುಂದರವಾಗಿವೆ. ಇವು ಉತ್ತಮ-ವಾದ ಶಿಲ್ಪಕಲೆಯ ಮಟ್ಟವನ್ನು ಮುಟ್ಟಿವೆ. ಇವುಗಳ ಜೋಡಣೆ, ಬಣ್ಣ-ಗಳ ಸ್ವಾರಸ್ಯವಾದ ಸಮ್ಮಿಲನ, ನಯ ಮತ್ತು ನಿಷ್ಣಾತ ಕೈಗಳ ಕುಂಚದ ಎಳೆತ ಇವೆಲ್ಲವುಗಳು ಯುರೋಪದ ಉತ್ತಮೋತ್ತಮ ಚಿತ್ರಗಳಿಗೆ ಸರಿ ಸಮಾನವಾಗಿವೆ'ಯೆಂದು ಒಬ್ಬರು ಹೇಳಿದ್ದಾರೆ. ಈ ವರ್ಣಚಿತ್ರಗಳ ಬಾಹ್ಯ ರೇಷೆ ಹೊರಮಗ್ಗಲು ಬೇಕಾದ ಕಡೆಗೆ ಸ್ವಚ್ಛಂದವಾಗಿ, ಮೃದುವಾಗಿ ಹೊರ-ಳಿದೆ. ಆಕೃತಿಗಳು ದುಂಡುದುಂಡಾಗಿವೆ. ಎದ್ದು ಕಾಣಬೇಕಾದ ಭಾಗ-ಗಳನ್ನು ತಿಳಿಬಣ್ಣದಿಂದ ಚಿತ್ರಕಾರರು ತೋರಿಸಿದ್ದಾರೆ. ೩ನೆಯ ಗುಹೆಯಲ್ಲಿ ಮೋಡಗಳ ನಡುವೆ ಉಡ್ಡಾಣ ಮಾಡುವ ಗಂಧರ್ವದಂಪತಿಗಳ ದೃಶ್ಯ, ಶಿವ–ಪಾರ್ವತಿಯರ ಮದುವೆಯದೆಂದು ಹೇಳಲಾಗುತ್ತಿದ್ದ ದೃಶ್ಯ, ಉದ್ದನ್ನ ಟೊಪ್ಪಿಗೆ ಮತ್ತು ಅಂಗಿಯನ್ನು ಹಾಕಿಕೊಂಡು ಕೊಳಲ ಗಾನಕ್ಕೆ ಹೊಂದಿ-ಕೊಂಡು ಓರ್ವ ಸ್ತ್ರೀ ನರ್ತಿಸುವ ದೃಶ್ಯ ನೋಡುವಂತಹವಿವೆ. ಈ ವರ್ಣ ಚಿತ್ರಗಳ ಮೇಲ್ಮೆಯನ್ನು ನೋಡಿದರೆ ಕರ್ನಾಟಕಕ್ಕೆ ಒಂದು ಸ್ವತಂತ್ರ ವರ್ಣ ಚಿತ್ರಕಲಾ ಪದ್ಧತಿಯು ಇತ್ತೆಂದೆನಿಸುವದು. ಇಲ್ಲಿಯ ಗುಹೆಗಳ ಕೆಲವು ಮೂರ್ತಿಗಳಿಗೂ ಬಣ್ಣ ಬಳೆದಿತ್ತೆಂದು ಈಗ ಅಲ್ಲಲ್ಲಿ ಉಳಿದ ಕೆಂಪುಬಣ್ಣ-ದಿಂದ ಗೊತ್ತಾಗುವದು.

## ೬. ಬಾದಾಮಿಯ ವೈಶಿಷ್ಟ್ಯ

ಬಾದಾಮಿಯನ್ನು ನೋಡುವದು ಅವಶ್ಯವೇ ಎಂದು ಯಾರಾದರೂ ಕೇಳಿದರೆ ಅದಕ್ಕೆ ನಮ್ಮ ಉತ್ತರ 'ಹೌದು' ಎಂದಿದೆ. ಏಕೆಂದರೆ ಈ ಊರು ವೈಶಿಷ್ಟ್ಯಪೂರ್ಣವಾಗಿದೆ. ಅಂತಹವುಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸುತ್ತೇವೆ.

೧. ಕರ್ನಾಟಕದಲ್ಲಿಯೆ ಮನುಷ್ಯನಿರ್ಮಿತ ಅತಿ ಪ್ರಾಚೀನವಾದ ಗುಹಾಂತರ್ದೇವಾಲಯಗಳು ಈ ಊರಲ್ಲಿವೆ.

೨. ಹರಿವಂಶಾದಿ ವೈಷ್ಣವ ಪುರಾಣಗಳಲ್ಲಿ ಉಕ್ತವಾದ ಕೃಷ್ಣ ಮತ್ತು ವಿಷ್ಣುವಿಗೆ ಸಂಬಂಧಿಸಿದ ಘಟನೆಗಳು ಈ ನಾಡಿನಲ್ಲಿ ಎಲ್ಲಕ್ಕೂ ಮೊದಲು ಮೂರ್ತಿಗಳ ಸ್ವರೂಪದಲ್ಲಿ ದೊರೆಯುವದು ಬಾದಾಮಿಯಲ್ಲಿ.

೩. ಸಮಸ್ತಭಾರತದಲ್ಲಿಯೇ ಶಕವರ್ಷವನ್ನು ಉಲ್ಲೇಖಿಸುವ ಇದುವರೆಗೆ ದೊರೆತ ಅತಿ ಪ್ರಾಚೀನ ಶಾಸನ ಈ ಊರಿನದು.

೪. ಕರ್ನಾಟಕದ ಪ್ರಾಚೀನ ವಾಸ್ತುಶಿಲ್ಪ, ಮೂರ್ತಿಶಿಲ್ಪ ಮತ್ತು ವರ್ಣಚಿತ್ರ ಇವುಗಳ ಪರಿಪಕ್ವಾವಸ್ಥೆ ಮತ್ತು ಮೇಲ್ಮೆ ತ್ರಿವೇಣೀಸಂಗಮದ ಹಾಗೆ ಬಾದಾಮಿಯಲ್ಲಿ ಸಿಗುತ್ತವೆ.

೫. ಕರ್ನಾಟಕ ಸಂಗೀತಗಾರರು ತಮ್ಮ ಕಾರ್ಯಕ್ರಮದ ಪ್ರಾರಂಭದಲ್ಲಿ ಸ್ತುತಿಸುವ ಗಣಪತಿ ಬಾದಾಮಿ( ವಾತಾಪಿ )ಯ ಗಣಪತಿ.

೬. ಅಪಮಾನಕ್ಕಿಂತ ಮೃತ್ಯು ಲೇಸು. ಏಕೆಂದರೆ ಮೃತ್ಯು ಸ್ವಲ್ಪಕಾಲ ದುಃಖ ಕೊಡುವಂತಹದು. ಆದರೆ ಮಾನಭಂಗವು ದಿನೇ ದಿನೇ ದುಃಖ ಕೊಡುತ್ತದೆಂದು ತಿಳಿದು ವರ್ತಿಸಿದ ಧೀರನಾದ ಕಪ್ಪೆ ಅರಭಟ್ಟನು ಬಾದಾಮಿಯಲ್ಲಿದ್ದನು.

೭. ಕನ್ನಡ ಸಾಹಿತ್ಯದಲ್ಲಿ ಇದುವರೆಗೆ ದೊರೆತ ಎಲ್ಲಕ್ಕೂ ಮೊದಲನೆಯ ತ್ರಿಪದಿಯ ಛಂದಸ್ಸಿನ ಉಲ್ಲೇಖ ಬಾದಾಮಿಯಲ್ಲಿ ದೊರೆಯುತ್ತದೆ.

ಆದುದರಿಂದ ಪ್ರತಿಯೊಬ್ಬ ಭಾರತೀಯನು ಬಾದಾಮಿಯನ್ನು ನೋಡಿ, ತಣಿದು ತನ್ನ ಮನಸ್ಸನ್ನು ಆಹ್ಲಾದಗೊಳಿಸಬೇಕೆಂದು ನಾವು ಸೂಚಿಸುತ್ತೇವೆ.

# ಬನಶಂಕರಿ

ಬನಶಂಕರಿಯು ಒಂದು ಸುಪ್ರಸಿದ್ಧ ಪವಿತ್ರ ಸ್ಥಳ (ಚಿತ್ರ ನೋಡಿರಿ). ಅದರ ಅಧಿದೇವತೆಯಾದ ಬನದದೇವಿ, ಬನಶಂಕರಿ ಅಥವಾ ಶಾಕಂಭರಿ ಕರ್ನಾಟಕದ ಅನೇಕಮನೆತನಗಳ ಮನೆದೇವತೆಯಾಗಿದ್ದಾಳೆ. ಈ ಸ್ಥಳದ



**ಬನಶಂಕರೀ ದೇವಾಲಯ, ಬನಶಂಕರಿ**

ಮಹತ್ವವು ಬನಶಂಕರೀಮಹಾತ್ಮ್ಯೆ ಎಂಬ ಸ್ಥಳಪುರಾಣದಲ್ಲಿ ಬಂದಿದೆ. ಶಾಕಂಭರಿಯು ಶ್ರೀಮಹಾಲಕ್ಷ್ಮೀ, ಮಹಾಕಾಳಿ ಮತ್ತು ಮಹಾಸರಸ್ವತಿ-ಯೆಂಬ ಅವತಾರಗಳನ್ನು ಧಾರಣ ಮಾಡಿದ್ದನ್ನು ಅದರಲ್ಲಿ ವಿವರಿಸಲಾಗಿದೆ.

ಈ ಬನಶಂಕರಿಯು ಕ್ಷೇತ್ರವು ಬಾದಾಮಿಯ ಆಗ್ನೇಯಕ್ಕೆ ಬಾದಾಮಿಯಿಂದ ಚೊಳಚಗುಡ್ಡ, ಶಿವಯೋಗಮಂದಿರ, ಮಹಾಕೂಟಕ್ಕೆ ಹೋಗುವ ರಸ್ತೆಯ ಮೇಲೆ ಬಾದಾಮಿಯಿಂದ ೩ ಮೈಲುಗಳ ಅಂತರದಲ್ಲಿದೆ. ಅಲ್ಲಿಗೆ ಹೋಗಲು ಟಾಂಗಾ, ಎಸ್. ಟಿ. ಬಸ್ ಇತ್ಯಾದಿ ವಾಹನಗಳ ಅನುಕೂಲತೆಯಿರುವದು.

ಬನಶಂಕರಿಯ ಸುತ್ತುಮುತ್ತಲು ಬನವಿದೆ. ಸರಸ್ವತೀ ಹಳ್ಳ ಸಮೀಪದಲ್ಲಿಯೇ ಹರಿಯುವದರಿಂದ ತೆಂಗು, ಬಾಳೆ ಮತ್ತು ಎಲೆಯ ತೋಟಗಳು ಅಲ್ಲಿ ಇರುತ್ತವೆ. ಬನಶಂಕರೀ ದೇವಿಯ ಗುಡಿಯ ಕಟ್ಟಡ ವಿಜಯನಗರದ



**ಬನಶಂಕರೀ ದೇವಾಲಯ, ಬನಶಂಕರಿ**

ಕಾಲದ್ದೆಂದು ಹೇಳಬಹುದು (ಚಿತ್ರನೋಡಿರಿ). ಈ ಗುಡಿಯ ಪ್ರಾಕಾರದಲ್ಲಿ ಎರಡು ಕಲ್ಲಿನ ದೀಪಮಾಲೆಯ ಕಂಬಗಳಿವೆ. ಗುಡಿಗೆ ಮುಖಮಂಟಪ, ಮಂಟಪ ಮತ್ತು ಗರ್ಭಗುಡಿ ಇತ್ಯಾದಿ ಭಾಗಗಳಿವೆ. ಗರ್ಭಗುಡಿಯಲ್ಲಿ ಕರಿಯ ಕಲ್ಲಿನಲ್ಲಿ ಕೆತ್ತಿದ ಬನಶಂಕರೀ ದೇವಿಯ ಮೂರ್ತಿ ಸಿಂಹದ ಮೇಲೆ

ವಿರಾಜಮಾನವಾಗಿದೆ. ಈ ದೇವಿಯ ದರ್ಶನ ಪಡೆಯಲು ಭಕ್ತರು ದೂರ-ದಿಂದ ಬರುತ್ತಾರೆ. ಪಟೇಗಾರರು ಮತ್ತು ದೇವಾಂಗ ಸಮಾಜದವರು ಹೆಚ್ಚಿನ ಪ್ರಮಾಣದಲ್ಲಿ ಈ ದೇವಿಯ ಭಕ್ತರಿದ್ದಾರೆ.

ಬನಶಂಕರೀ ಗುಡಿಯ ಮುಂದಿರುವ ಹೊಂಡಕ್ಕೆ ಹರಿಶ್ಚಂದ್ರತೀರ್ಥವೆಂದು ಹೇಳುತ್ತಾರೆ. ಅದನ್ನು ಹೊಡೆದ ಕಲ್ಲುಗಳಿಂದ ಚನ್ನಾಗಿ ಕಟ್ಟಿರುತ್ತಾರೆ. ಅದರ ಮೂರು ಬದಿಗೆ ಸಣ್ಣ ಸಣ್ಣ ಮಂಟಪಗಳಿವೆ. ದೇವಿಯ ತೆಪ್ಪೋತ್ಸವ-ವನ್ನು ಈ ಹೊಂಡದಲ್ಲಿ ಮಾಡುತ್ತಾರೆ. ಈ ಹೊಂಡದ ವಿಸ್ತಾರ ಸುಮಾರು ೩೬೦' ಚಚ್ಚೌಕು ಇರುವದು. ಬನಶಂಕರೀ ಗುಡಿಯ ಪೂರ್ವಕ್ಕೆ ಹರಿದ್ರಾತೀರ್ಥ, ಉತ್ತರಕ್ಕೆ ತೈಲತೀರ್ಥ ಮತ್ತು ದಕ್ಷಿಣಕ್ಕೆ ಸರಸ್ವತೀಹಳ್ಳ ಇರುವವು.

ಬಾದಾವಿಯ ಚಲುಕ್ಯರ ಕಾಲದ ಒಂದು ಪ್ರಾಚೀನ ದೇವಾಲಯ ಈ ಗುಡಿಯ ಎಡಮಗ್ಗಲಲ್ಲಿದೆ. ಇದೇ ಬನಶಂಕರಿಯ ಮೊದಲಿನ ದೇವಸ್ಥಾನ.

ಬನಶಂಕರಿಯ ಉಲ್ಲೇಖ ಸದ್ಯಕ್ಕೆ ದೊರೆತಮಟ್ಟಿಗೆ, ಕಲ್ಯಾಣದ ಚಲುಕ್ಯ ( ೧ ನೆಯ ) ಜಗದೇಕಮಲ್ಲನ ಕಾಲದ್ದೆಂದು ಅದೇ ಗುಡಿಯ ಶಾಸನಗಳಿಂದ ಗೊತ್ತಾಗುವದು. ಈ ಅರಸನ ಕಾಲದ ಶಾಸನಗಳು ಇಲ್ಲಿ ಎರಡಿವೆ. ಒಂದನೆಯ ಶಾಸನವು ರಾಷ್ಟ್ರಕೂಟ ಭೀಮದೇವನ ಸೇವಕನಾದ ಸೇನಬೋವ ನಾಗವರ್ಮಯ್ಯನು ಬಹುಶಃ ಯುದ್ಧದಲ್ಲಿ ಸತ್ತದ್ದನ್ನು ಉಲ್ಲೇ-ಖಿಸುತ್ತದೆ. ಮತ್ತೊಂದು ಶಾಸನವು ಸಾಹಸ ಭೀಮನಾದ ಕೇತಿಮಯ್ಯ-ನೆಂಬವನು ಶ್ರೀಬನದೇವಿಯ ಮುಂದೆ ಶಿಲಾಸ್ತಂಭವನ್ನು ನಿಲ್ಲಿಸಿದನೆಂದು ತಿಳಿಸುವದು. ಇವೆರಡೂ ಶಾಸನಗಳಲ್ಲಿ ಈ ದೇವಿಯ ಹೆಸರು **ಶ್ರೀಬನದೇವಿ** ಎಂದು ಬರುವದು.

**ಬನದ ಹುಣ್ಣಿವೆಗೆ** (ಜಾನೇವಾರಿ ತಿಂಗಳಲ್ಲಿ) ಬನಶಂಕರಿಯ ದೊಡ್ಡ ಜಾತ್ರೆಯಾಗುವದು. ಅಗ ಅಲ್ಲಿ ಒಂದು ಲಕ್ಷದ ವರೆಗೂ ಜನರು ಕೂಡಿ ದೇವಿಯ ರಥೋತ್ಸವ ಇತ್ಯಾದಿ ಸಮಾರಂಭಗಳಲ್ಲಿ ಭಾಗವಹಿಸುವರು. ಈ ಜಾತ್ರೆಯು ಒಂದು ತಿಂಗಳವರೆಗೂ ಕೂಡುವದು.

# ಮಹಾಕೂಟ

ಮಹಾಕೂಟವು ಒಂದು ರಮ್ಯಸ್ಥಳ. ಅದು ಬಾದಾಮಿಯಿಂದ ಗುಡ್ಡದ ಮೇಲೆ ಇರುವ ಒಳಹಾದಿಯಿಂದ ೩ ಮೈಲು, ಅದೇ ಊರಿಂದ ಬನಶಂಕರಿ, ಶಿವಯೋಗಮಂದಿರಗಳ ಮೇಲಿಂದ ೧೦ ಮೈಲು ಇರುವದು. ಈ ಎರಡನೆಯ ಹಾದಿಯಿಂದ ಹೋಗಲು ರಸ್ತೆ ನೆಟ್ಟಗಿದ್ದು ಟಾಂಗಾ, ಕಾರು ಮೊದಲಾದವು ಅಲ್ಲಿಯ ವರೆಗೆ ಹೋಗುತ್ತವೆ. ಬಾದಾಮೀ ಸ್ಟೇಶನ್ ಮತ್ತು ಪಟ್ಟದಕಲ್ಲ ರಸ್ತೆಯ ಮೇಲಿರುವ ಕೆಂದೂರ ಗ್ರಾಮದಿಂದಲೂ ಮಹಾಕೂಟಕ್ಕೆ ಹೋಗಲು ಬರುವದು.

ಶಿವಯೋಗಮಂದಿರದ ಮೇಲಿಂದ ಮಹಾಕೂಟಕ್ಕೆ ಹೋಗುವ ಮಾರ್ಗದಲ್ಲಿ, ಎಡಗಡೆಗೆ **ಹಳೆಯ ಮಹಾಕೂಟ** ಹತ್ತುವದು. ಇಲ್ಲಿ ೫–೬ ನೆಯ ಶತಮಾನದ ಒಂದೆರಡು ಪ್ರಾಚೀನ ಗುಡಿಗಳು, ಕಟ್ಟಿದ ಹೊಂಡ, ಲಕುಳೀಶ, ವಿಷ್ಣು ಮೊದಲಾದವರ ಭಗ್ನ ಮೂರ್ತಿಗಳು ಇರುತ್ತವೆ. ಈ ಹಳೆಯ ಮಹಾಕೂಟದಲ್ಲಿರುವ ಮುಖ್ಯ ಗುಡಿ, ಅದರ ಕೆಲವು ಭಾಗ ಬಿದ್ದಿದ್ದರೂ ಮಹತ್ವದ್ದಾಗಿದೆ. ಅದನ್ನು ಬೌದ್ಧ ಚೈತ್ಯಾಲಯದ ವಾಸ್ತುಶಿಲ್ಪದ ರೀತಿಯಲ್ಲಿ ಕಟ್ಟಿದ್ದಾರೆ. ಇದು ರಚನೆಯಲ್ಲಿ ಐಹೊಳೆಯ ದುರ್ಗಾಗುಡಿಯನ್ನು ಹೋಲುವದು. ಈ ಗುಡಿಗಳ ಹಿಂಭಾಗ ದುಂಡಾಗಿದೆ. ಇಲ್ಲಿಂದ **ಹೊಸ ಮಹಾಕೂಟವು** ಸುಮಾರು ೧ ಮೈಲು ಆಗುವದು. ಅಲ್ಲಿಗೆ ಹೋಗುವಾಗ ಬಲಬದಿಗೆ ಹೊಸ ಮಹಾಕೂಟದ ಸಮೀಪದಲ್ಲಿ ಹಾಟಕೇಶ್ವರ, ಭೈರವೇಶ್ವರ ದೇವಾಲಯಗಳು ಇರುತ್ತವೆ. ಇವೆರಡೂ ಗುಡಿಗಳು ಸಾದಾಯಿವೆ. ಭೈರವೇಶ್ವರನ ಗರ್ಭಗುಡಿಯಲ್ಲಿ ವಿಷ್ಣುವಿನ ಮೂರ್ತಿಯಿರುವದು. ಮತ್ತು ಅದರ ಹತ್ತರ ಅವನ ಅವತಾರಗಳಾದ ವರಾಹ ಮತ್ತು ನರಸಿಂಹ ಇವರ ಮೂರ್ತಿಗಳಿರುವವು.

ರಸ್ತೆಯಗುಂಟ ಮುಂದೆ ಹೋದರೆ ನಿಸರ್ಗ ರಮಣೀಯತೆಯ ಮಡಿಲಲ್ಲಿ ನಿಂತ ಗುಡಿಗಳ ಗುಂಪೇ ಹೊಸ ಮಹಾಕೂಟ. ಜವುಳು ನೀರು ಇಡೀ ವರ್ಷದಲ್ಲೆಲ್ಲ ಹರಿಯುತ್ತಿರುವುದರಿಂದ ತೆಂಗಿನ ಗಿಡಗಳು, ಬಾಳೆಯ

ತೋಟಗಳು ಇಲ್ಲಿ ಇರುತ್ತವೆ. ಗುಡಿಗಳ ಮೂರೂ ದಿಕ್ಕಿನಲ್ಲಿ ಸಣ್ಣ ವೊರಡಿ ಆವರಿಸಿದೆ. ಇದಕ್ಕೆ ಸಿಂಹಾಚಲವೆಂಬ ಹೆಸರು.

ಮಹಾಕೂಟವು ಒಂದು ಪುಣ್ಯಸ್ಥಳ. ಇದೇ ಸ್ಥಳದಲ್ಲಿ ಅಗಸ್ತ್ಯರು ವಾತಾಪಿ, ಇಲ್ವಲರನ್ನು ಸಂಹರಿಸಿದರೆಂದು ಮಹಾಕೂಟ ಮಹಾತ್ಮ್ಯೆಯು ಹೇಳುವದು. ಉತ್ತರ ದಿಕ್ಕಿನಲ್ಲಿ ಪಿನಾಕಿನಾಥ, ಪೂರ್ವಕ್ಕೆ ರಾಮಲಿಂಗ, ದಕ್ಷಿಣದಲ್ಲಿ ಕಪಿಲೇಶ ಮತ್ತು ಪಶ್ಚಿಮದಿಕ್ಕಿನಲ್ಲಿ ಮಲ್ಲಿಕಾರ್ಜುನ ಎಂಬ ದೇವತೆಗಳ ಗುಡಿಗಳಿವೆಯೆಂದು ಈ ಸ್ಥಳಪುರಾಣದಿಂದ ಗೊತ್ತಾಗುತ್ತದೆ. ವ್ಯಾಘ್ರಪಾದೇಶ, ವಾಕೂಟೇಶ (ಮಹಾಕೂಟೇಶ್ವರ) ರ ದೇವಾಲಯಗಳೂ



**ಮಹಾಕೂಟೇಶ್ವರ ದೇವಾಲಯ, ಮಹಾಕೂಟ**

ಇಲ್ಲಿ ಅವೆ. ಇಲ್ಲಿ ಸುಮಾರು ೧೫–೨೦ ಸಣ್ಣದೊಡ್ಡ ಗುಡಿಗಳಿವೆ. ಅವುಗಳ ಸುತ್ತಲೂ ಒಂದು ಪ್ರಾಕಾರವಿರುವದು. ಈ ಪ್ರಾಕಾರದಲ್ಲಿ ಪ್ರವೇಶಿಸಲು ಪೂರ್ವಕ್ಕೆ ಒಂದು ಮಹಾದ್ವಾರವಿದೆ. ಅದರ ಎದುರಿಗೆ ಮಹಾಕೂಟೇಶ್ವರನ ದೊಡ್ಡ ಗುಡಿ ಪೂರ್ವಕ್ಕೆ ಮುಖಮಾಡಿ ನಿಂತಿದೆ ( ಚಿತ್ರ ನೋಡಿರಿ ). ಈ

ಗುಡಿಗೆ ಅರ್ಧಮಂಟಪ, ಮಂಟಪ, ಗರ್ಭಗುಡಿ ಈ ಪ್ರಕಾರ ಭಾಗಗಳಿವೆ. ಈ ಗರ್ಭಗುಡಿಯಲ್ಲಿ ಮಹಾಕೂಟೇಶ್ವರನ ಸುಂದರವಾದ ಲಿಂಗವಿರುವದು. ಅರ್ಧಮಂಟಪದ ಕಂಬಗಳ ಮೇಲೆ ಎರಡು ಶಾಸನಗಳಿವೆ. ಇವುಗಳಲ್ಲಿಯ ಒಂದು ಶಾಸನದಿಂದ ಬಾದಾಮಿಯ ಚಲುಕ್ಯ ಅರಸನಾದ ವಿಜಯಾದಿತ್ಯನ (ಕ್ರಿ. ಶ. ೬೯೬–೭೩೩) ಸೂಳೆ ವಿನಾಪೋಟಿಯೆಂಬವಳು ದೇವರಿಗೆ ಒಂದು ರತ್ನಪೀಠ ಮತ್ತು ಬೆಳ್ಳಿಯ ಛತ್ರವನ್ನು ಮಾಡಿಸಿಕೊಟ್ಟು ಕೆಲವು ಭೂಮಿ-ಯನ್ನು ದಾನಮಾಡಿದಳೆಂದು ತಿಳಿದುಬರುತ್ತದೆ. ಗುಡಿಯ ಮಂಟಪದಲ್ಲಿ ಮೂರು-ನಾಲ್ಕು ಶಾಸನಗಳಿವೆ. "ಪವಿತ್ರಸ್ಥಾನದಲ್ಲಿ ಮಾಡಿದ ಪಾಪವು ವಜ್ರಲೇಪದಂತೆ ನಾಶವಾಗದೆ ಉಳಿಯುವದು" ಎಂದು ಇವುಗಳಲ್ಲಿಯ ಒಂದು. ಶಾಸನ ಹೇಳುತ್ತದೆ. ಈ ಗುಡಿಯ ಎದುರಿಗೆ, ಪ್ರಾಕಾರದ ಹೊರಗೆ, ಮಂಗಲೇಶನು ನಿಲ್ಲಿಸಿದ ಧರ್ಮಜಯಸ್ತಂಭವನ್ನು ಈಗ ವಿಜಾಪುರದ ಪ್ರಾಚ್ಯ-ವಸ್ತು ಸಂಗ್ರಹಾಲಯದಲ್ಲಿಟ್ಟಿದ್ದಾರೆ. ಮಂಗಲೇಶನು ತನ್ನ ಮಲತಾಯಿ-ಯಾದ ದುರ್ಲಭದೇವಿಯ ಅಪ್ಪಣೆ ಪಡೆದು ಕಿಸುವೊಳಲ್ (ಪಟ್ಟದಕಲ್ಲ), ಕೆಂದೂರುಮಾನ್ಯ (ಕೆಂದೂರು), ನಂದಿಗ್ರಾಮ (ನಂದಿಕೇಶ್ವರ?), ಆರ್ಯ-ಪುರ (ಐಹೊಳೆ) ಮೊದಲಾದ ೧೦ ಊರುಗಳನ್ನು ಮಕುಟೇಶ್ವರನಿಗೆ ದಾನ ಮಾಡಿದನೆಂದು ಈ ಕಂಬದ ಮೇಲಿನ ಶಾಸನವು ತಿಳಿಸುತ್ತದೆ. ಇದರಿಂದ ಈ ಲಿಂಗದ ಹೆಸರು ಮೊದಲು ಮಹಾಕೂಟೇಶ್ವರ ಎಂದಿರದೆ ಮಕುಟೇಶ್ವರ ಎಂದಿತ್ತೆಂಬುದು ಗೊತ್ತಾಗುವದು.

ಮಹಾಕೂಟೇಶ್ವರನ ಎದುರಿಗೆ ಭಕ್ತರು ಮಾಡಿಸಿಕೊಟ್ಟ ಸುಮಾರು ೩' ಎತ್ತರವಾದ ೨–೩ ಸಣ್ಣ ಗುಡಿಗಳು, ಗರುಡ, ಮಹಿಷಾಸುರಮರ್ದಿನಿ, **ಕಾಶೀರಾಜ** (?), ಒಬ್ಬ ಭಕ್ತಳು ಮೊದಲಾದವರ ಕಲ್ಲಿನ ಮೂರ್ತಿಗಳಿವೆ. ಈ ಗುಡಿಯ ಹೊರಗೋಡೆಯ ಮೇಲೆ ಶಿವ-ಪಾರ್ವತಿ, ರಾವಣನು ಕೈಲಾಸ-ವನ್ನು ಎತ್ತುತ್ತಿರುವ ದೃಶ್ಯ, ಯುದ್ಧದ ದೃಶ್ಯ ಮೊದಲಾದವುಗಳು ಇರುತ್ತವೆ. ಇದರ ವಿಮಾನ ದ್ರಾವಿಡ ಪದ್ಧತಿಯದಿರುವದು (ಚಿತ್ರ ನೋಡಿರಿ).

ಈ ಗುಡಿಯ ಎದುರಿಗೆ ಭಗ್ನವಾದ **ಲಜ್ಜಾ-ಗೌರಿಯ ಮೂರ್ತಿ** ಬಿದ್ದಿದೆ. ಇದು ಮೊದಲು, ಅದೇ ಪ್ರಾಕಾರದಲ್ಲಿರುವ ಸರಸ್ವತೀ ಗುಡಿಯ ಹತ್ತರವಿರುವ ತನ್ನ (ಲಜ್ಜಾಗೌರಿಯ) ಗುಡಿಯಲ್ಲಿತ್ತು. ಅಲ್ಲಿ ಈಗ ಬೇರೆ ಸ್ತ್ರೀ ವಿಗ್ರಹವಿದೆ. ಈ ಲಜ್ಜಾಗೌರಿಯ ಮೂರ್ತಿಯನ್ನು ಬಂಜೆಯರಾದ

ಸ್ತ್ರೀಯರು ಸಂತಾನ ಪ್ರಾಪ್ತಿಗಾಗಿ ಪೂಜಿಸುತ್ತಿದ್ದರು.

**ಸರಸ್ವತೀ ಗುಡಿಯು** ಮಹಾಕೂಟೇಶ್ವರನ ಎದುರಿಗೆ, ಪ್ರಕಾರದ ಗೋಡೆಗೆ ಹೊಂದಿ ಇರುವದು. ಅದರಲ್ಲಿರುವ ಸರಸ್ವತಿಯ ಮೂರ್ತಿಯು ಸುಂದರವಾಗಿದೆ. ಅದಕ್ಕೆ ನಾಲ್ಕು ಭುಜಗಳಿದ್ದು, ಮೇಲಿನ ಕೈಗಳಲ್ಲಿ ಅಂಕುಶ, ಪಾಶಗಳಿರುವವು. ಕೆಳಗಿನ ಬಲಗೈ ಅಭಯಮುದ್ರೆಯಲ್ಲಿದೆ ( ಇಲ್ಲಿ ಜಪಮಣಿಯೂ ಇದೆ. ) ಮತ್ತು ಎಡಗೈಲ್ಲಿ ಪುಸ್ತಕವಿದೆ.

ಮಹಾಕೂಟೇಶ್ವರನ ಗುಡಿಯ ಬಲಗಡೆಗೆ ಅಂದರೆ ದಕ್ಷಿಣಕ್ಕೆ **ವೀರ-ಭದ್ರನಗುಡಿ**ಯಿದೆ. ಈ ಗುಡಿಯ ಹತ್ತರ ವೇಣುಗೋಪಾಲನ ಮೂರ್ತಿ ಇರು-ವದು. ವೀರಭದ್ರನಗುಡಿಯ ಹಿಂದೆ ಔತ್ತರೇಯ ವಿಮಾನವುಳ್ಳ ಶಿವನ ಒಂದು ಸಣ್ಣ ಗುಡಿ ಇರುವದು ( ಚಿತ್ರ ನೋಡಿರಿ ). ಈ ಗುಡಿಯ ಹೊರಬದಿಗೆ ಲಕುಲೀಶನ ವಿಗ್ರಹವಿದೆ. ಇವನ ಕಿವಿಯಲ್ಲಿ ಹಾವು ಏನನ್ನೋ ಹೇಳು-ವಂತಿದೆ. ಇದರ ಹತ್ತಿರವಿರುವ ಹೊಂಡವೆ **ವಿಷ್ಣುಪುಷ್ಕರಣಿ.** ಈ ಹೊಂಡದ ಮಹತ್ವವನ್ನು (ಚಿತ್ರನೋಡಿರಿ.) ಮಹಾಕೂಟ ಮಹಾತ್ಮ್ಯೆಯು ವಿಶದವಾಗಿ ವರ್ಣಿಸುತ್ತದೆ. ಇದನ್ನು ಅಗಸ್ತ್ಯಮುನಿಗಳು ನಿರ್ಮಿಸಿದ್ದಾರೆಂದು ಹೇಳುತ್ತಾರೆ. ವೈಶಾಖ ಮಾಸದ ಲಲಿತಾ ಪೌರ್ಣಮಿ ( ಅಂದರೆ ಆಗೀ-ಹುಣ್ಣಿವೆ ) ಯ ದಿವಸ ಇದರಲ್ಲಿ ಸ್ನಾನ ಮಾಡಿದರೆ ಕಾಶಿಯಲ್ಲಿ ಸುದೀರ್ಘ ಕಾಲ ತಪಸ್ಸುಮಾಡಿದ ಫಲ ಬರುವದೆಂದು ಮಹಾಕೂಟೇಶ್ವರ ಸ್ಥಳಪುರಾ-ಣದಲ್ಲಿ ಬಂದಿದೆ. ಈ ವಿಷ್ಣುಪುಷ್ಕರಣಿಯ ಪಾವಿತ್ರ್ಯವನ್ನು ಸೂಚಿಸುವ ಕೆಲವು ಕಥೆಗಳೂ ಇವೆ. ಅದರಲ್ಲಿ ಕಾಶಿಯ ರಾಜನದೂ ಒಂದು. ಹಿಂದಕ್ಕೆ ಕಾಶಿಯಲ್ಲಿ ದಿವೋದಾಸನೆಂಬ ಒಬ್ಬ ಅರಸನಿದ್ದನು. ಅವನಿಗೆ ದಿವ್ಯಾದೇವಿ-ಯೆಂಬ ಒಬ್ಬ ಮಗಳಿದ್ದಳು. ಅವಳ ಮುಖ ಮಂಗನ ಮುಖದಂತೆ ಮತ್ತು ಉಳಿದ ದೇಹ ಸ್ತ್ರೀ ದೇಹದಂತೆ ಇತ್ತು. 'ಇದು ಹೀಗೆ ಏಕಾಗಿದೆ, ಇದರ ನಿವಾರಣೋಪಾಯ ಏನಾದರೂ ಇದೆಯೆ' ಎಂದು ಚಾತುಕರ್ಣ್ಯ ಎಂಬ ಪಂಡಿತನನ್ನು ಅವನು ಕೇಳಿದನು. ಅದಕ್ಕೆ ಚಾತುಕರ್ಣ್ಯನು 'ನಿನ್ನ ಮಗಳು ಹಿಂದಿನ ಜನ್ಮದಲ್ಲಿ ಪಾಪಕರ್ಮ ಮಾಡಿದ್ದರ ಫಲವಾಗಿ ಮಹಾ-ಕೂಟದಲ್ಲಿ ಮಂಗನಾಗಿ ಹುಟ್ಟಿದಳು. ಆದರೆ ಅವಳು ಸತ್ತಾಗ ಅವಳ ದೇಹ ಮಾತ್ರ ವಿಷ್ಣುಪುಷ್ಕರಣಿಯಲ್ಲಿ ಬಿದ್ದು ಮುಖವು ಬೀಳದೆ ಆ ಪುಷ್ಕರಣಿಯ ಮೇಲಿರುವ ಔದುಂಬರ ಮರದಲ್ಲಿ ಸಿಕ್ಕಿಕೊಂಡಿದೆ. ಆ ಮುಖವನ್ನು ನೀನು

ಆ ಪುಷ್ಕರಣಿಯಲ್ಲಿ ಕೆಡವಿಸಿದರೆ ನಿನ್ನ ಮಗಳಿಗೆ ಸ್ತ್ರೀಯ ಮುಖ ಬರುವದು' ಎಂದು ಹೇಳಿದನು. ಮುಂದೆ ಅದೇ ಪ್ರಕಾರ ಕಾಶಿಯ ರಾಜನು ಮಾಡಲು ಅವನ ಮಗಳಿಗೆ ಮನುಷ್ಯರ ಸ್ವಾಭಾವಿಕ ಮುಖ ಬಂದಿತೆಂದು ಹೇಳಿದೆ. ಕೈ ಮುಗಿದು ಕುಳಿತ ಕಾಶಿಯ ರಾಜನ ಮೂರ್ತಿಯನ್ನು ಮಹಾಕೂಟದಲ್ಲಿ ಈಗಲೂ ತೋರಿಸುತ್ತಾರೆ.

ವಿಷ್ಣು ಪುಷ್ಕರಣಿಯಲ್ಲಿ ಒಂದು ಕಲ್ಲಿನ ಮಂಟಪವಿದ್ದು ಅದರಲ್ಲಿ ಒಂದು ಚತುರ್ಮುಖಲಿಂಗ ಮತ್ತು ಒಂದು ಮೂಲೆಯಲ್ಲಿ **ಕೋಣೆಯ ಶಂಕರಲಿಂಗ** ಹೀಗೆ ಎರಡು ಲಿಂಗಗಳಿರುತ್ತವೆ. ಈ ಕೋಣೆಯ ಶಂಕರನನ್ನು ಪೂಜಿಸಲು ನೀರೊಳಗೆ ಮುಳುಗಿ ಹೋಗಬೇಕಾಗುವದು. ಪುಷ್ಕರಣಿಗೆ ನೀರು ಯಾವಾಗಲೂ ಬರುತ್ತಿರುವುದರಿಂದ ಮತ್ತು ಹೆಚ್ಚಾದ ನೀರು ಹರಿದು ಹೊರಗೆ ಹೋಗುತ್ತಿರುವುದರಿಂದ ಅಲ್ಲಿಯ ನೀರಿನ ಆಳ ಸತತ ಅಷ್ಟೇ ಇರುವದು.

ಈ ಪುಷ್ಕರಣಿಯ ಪಶ್ಚಿಮ ಭಾಗದಲ್ಲಿ ಎರಡು ಸಣ್ಣ ಗುಡಿಗಳಿವೆ. ಅವುಗಳ ಹೊರಗೋಡೆಗಳ ಮೇಲೆ ಅರ್ಧನಾರೀನಟೇಶ್ವರ, ವರಾಹ ಇತ್ಯಾದಿ ಮೂರ್ತಿಗಳಿವೆ.

ಮುಂದೆ ಹಾಗೆಯೆ ದಕ್ಷಿಣಕ್ಕೆ ಹೋದರೆ ೭-ಆನೆಯ ಶತಮಾನದಲ್ಲಿ ಕಟ್ಟಲ್ಪಟ್ಟ ಮಲ್ಲಿಕಾರ್ಜುನನ ಗುಡಿ ಬರುವದು. ಅದರ ಹೊರಗೋಡೆಯ ಮೇಲೆ ವಿಷ್ಣು, ಶಿವ, ಓರ್ವ ಸ್ತ್ರೀದೇವತೆ ಮೊದಲಾದವರ ಮೂರ್ತಿಗಳಿವೆ. ಈ ಗುಡಿಯ ಅರ್ಧಮಂಟಪದ ಒಂದು ಕಂಬದ ಮೇಲೆ ಒಬ್ಬ ಮೀಸೆಯುಳ್ಳ ದ್ವಾರಪಾಲಕನು ನಿಲುವಂಗಿ ಧರಿಸಿ, ಕೈಯಲ್ಲಿ ಬಡಿಗೆಯನ್ನು ಹಿಡಿದುಕೊಂಡು ನಿಂತಿರುವನು. ಇಲ್ಲಿ ಒಂದು ಲಿಪಿಯೂ ಇರುವದು. ಗರ್ಭಗುಡಿಯ ಚೌಕಟ್ಟಿನ ಮೇಲೆ ಬಾದಾಮಿಯ ಚಲುಕ್ಯ ಶಿಲ್ಪದ ಪ್ರಕಾರ, ವಾಡಿಕೆಯಂತೆ ಗರುಡನಿರುವನು. ಈ ಮಂಟಪದ ಛತ್ತಿನಲ್ಲಿ ನಂದೀ ಸಮೇತನಾದ ಶಿವ, ಬ್ರಹ್ಮ, ಕಮಲ ಮೊದಲಾದವುಗಳನ್ನು ಕೆತ್ತಿದೆ. ಈ ಗುಡಿಯ ದಕ್ಷಿಣ ಗೋಡೆಯ ಮೇಲೆ, ಹೊರಮುಗ್ಗಲು, ಸುಂದರವಾದ ಅನೇಕ ಗೊಂಬೆಗಳಿವೆ. ಈ ಉತ್ತಮವಾದ ಗುಡಿಯು ಈಗ ಕಣ್ಣುಕಪ್ಪಡಿಗಳ ವಾಸಸ್ಥಾನವಾಗಿರುವುದರಿಂದ ದುರ್ಗಂಧಮಯವಾಗಿದೆ.

ಮಲ್ಲಿಕಾರ್ಜುನನ ಗುಡಿಯ ಪೂರ್ವಕ್ಕೆ, ಪ್ರಾಕಾರದ ಹೊರಗೆ ಒಂದು ದೊಡ್ಡ ಚೌಕಟ್ಟಿದೆ. ಅದರ ಎರಡೂ ಬದಿಗೆ ಎಲುವಿನ ಹಂದರದಂತಿದ್ದ ಒಂದು

ಪುರುಷ ಮತ್ತು ಒಂದು ಸ್ತ್ರೀವಿಗ್ರಹ ಇರುವವು. ಇವೆರಡೂ ನರ್ತಿಸುವ ಭೂತಗಳೆಂದು ತೋರುತ್ತದೆ. ಮಹಾಕೂಟವು ಒಂದುಕಾಲಕ್ಕೆ ಕಾಪಾಲಿಕ ಮತ್ತು ಲಾಕುಳರ ಮುಖ್ಯಸ್ಥಾನವಾಗಿತ್ತೆಂದೆನಿಸುವದು. ಈ ಗುಡಿಯ ಪ್ರಾಕಾರದ ಹೊರಗೆ ಬಹಳ ಲಿಂಗಗಳು ಹೇಳಹೆಸರಿಲ್ಲದೆ ಬಿದ್ದಿವೆ. ಬಾದಾವಿ, ಮಹಾಕೂಟ, ಐಹೊಳೆ ಮತ್ತು ಪಟ್ಟದಕಲ್ಲು ಈ ಊರುಗಳ ಮಧ್ಯ ಪ್ರದೇಶದಲ್ಲಿ ಒಟ್ಟು ಒಂದುಕೋಟಿ ಲಿಂಗಗಳಿವೆಯೆಂದು ಪ್ರತೀತಿಯಿದೆ. ಇದರಿಂದ ಈ ಭಾಗವು ಒಮ್ಮೆ ಒಂದು ಪ್ರಸಿದ್ಧ ಶೈವಕ್ಷೇತ್ರವಾಗಿತ್ತೆಂದು ಹೇಳಲಡ್ಡಿಯಿಲ್ಲ.

ಹಳೆಯ ಮಹಾಕೂಟ ಮತ್ತು ಹೊಸಮಹಾಕೂಟಗಳಲ್ಲಿ ಜನವಸತಿಯಿಲ್ಲ. ಮಾರ್ಚ-ಎಪ್ರಿಲ ತಿಂಗಳಲ್ಲಿ ಮಹಾಕೂಟೇಶ್ವರನ ಜಾತ್ರೆಯಾಗುವದು. ಮಹಾಕೂಟದಲ್ಲಿ ಲಗ್ನಾದಿ ಕಾರ್ಯಗಳನ್ನು ಜನರು ಜರುಗಿಸುತ್ತಾರೆ.

ಮಹಾಕೂಟೇಶ್ವರ ಗುಡಿಯ ಪ್ರಾಕಾರದ ಹೊರಗೆ, ತೇರಿನ ಮನೆಯ ಹತ್ತಿರ, ಒಂದು ೭-೮ ನೆಯ ಶತಮಾನದ ಪ್ರಾಚೀನ ದೇವಾಲಯವಿದೆ.

# ಶಿವಯೋಗ ಮಂದಿರ

ಮಲಪ್ರಭಾನದಿಯ ತೀರದಲ್ಲಿದ್ದ ಶಿವಯೋಗಮಂದಿರವು ಪುಣ್ಯಪುರುಷರ ಬೀಡಾಗಿದೆ. ಅದನ್ನು ಹಾನಗಲ್ಲ ಶ್ರೀಮನ್ನಿರಂಜನ ಪ್ರಣವಸ್ವರೂಪ ಶ್ರೀಕುಮಾರಸ್ವಾಮಿಗಳು ಕ್ರಿ. ಶ. ೧೯೦೯ ರಲ್ಲಿ ಸ್ಥಾಪಿಸಿದರು. ಪ್ರಶಾಂತವಾದ ವಾತಾವರಣವುಳ್ಳ ಈ ಸ್ಥಳವನ್ನು ವೀರಶೈವ ತತ್ವಜ್ಞಾನ ಮತ್ತು ಯೋಗ-ಸಾಧನೆಗೆ ಒಳ್ಳೆಯ ಸ್ಥಾನವೆಂದು ಅವರು ಆರಿಸಿದರು. ವೀರಶೈವ ಮಠಗಳಿಗೆ ಮಠಾಧಿಪತಿಗಳನ್ನು ತರಬೇತುಪಡಿಸುವದೂ ಈ ಶಿವಯೋಗಮಂದಿರದ ಉದ್ದೇಶವಾಗಿದೆ. ವಿದ್ಯಾರ್ಥಿಗಳಿಗೆ ಶಾಸ್ತ್ರಾಧ್ಯಯನ, ಬ್ರಹ್ಮಚರ್ಯ ಪರಿ-ಪಾಲನೆ, ಯೋಗಸಾಧನ, ನೈಷ್ಠಿಕಾಚರಣೆ ಇತ್ಯಾದಿಗಳನ್ನು ಸದಾಚಾರಿಗಳಾದ ಗುರುಗಳಿಂದ ಇಲ್ಲಿ ಮಾಡಿಸುತ್ತಿದ್ದಾರೆ. ಇಳಕಲ್ಲ ಶ್ರೀ ವಿಜಯ ಮಹಾಂತ-ಸ್ವಾಮಿಗಳು ಮತ್ತು ಹಾಳಕೇರಿ ಶ್ರೀಅನ್ನದಾನಿ ಸ್ವಾಮಿಗಳು ಮೊದಲು ಈ ಸಂಸ್ಥೆಯ ಸ್ಥಾಪನೆಗೆ ಮತ್ತು ಪೋಷಣೆಗೆ ಸಹಾಯಕರಾಗಿದ್ದಾರೆ. ಶಿವಯೋಗ ಮಂದಿರದ ಈಗಿನ ಸಂಚಾಲಕರು ಶ್ರೀ. ಮ. ನಿ. ಸದಾಶಿವ ಸ್ವಾಮಿಗಳು.

ಹಾನಗಲ್ಲ ಶ್ರೀಕುಮಾರಸ್ವಾಮಿಗಳು (ಚಿತ್ರ ನೋಡಿರಿ) ಮಹಾ ಸಾಹಸಿ-ಗಳು, ಕರ್ಮಯೋಜಕರು ಮತ್ತು ನಿಷ್ಠಾವಂತರು. ಅವರು ವೀರಶೈವ ಸಂಸ್ಕೃತಿಗೆ ಪೋಷಕವಾಗುವಂಥ ಶಿಕ್ಷಣವು ಶಿವಯೋಗ ಮಂದಿರದಲ್ಲಿಯೇ ಸಿಗುವಂತೆ ಮಾಡಲು ಬಹಳ ಪ್ರಯತ್ನಿಸಿದ್ದಾರೆ. ಅವರ ಪ್ರಯತ್ನದ ಅಮೃತಫಲ ಈಗ ಕರ್ನಾಟಕದಲ್ಲೆಲ್ಲ ದೊರೆಯುತ್ತಿದೆ. ಹುಬ್ಬಳ್ಳಿಯ ಮೂರು-ಸಾವಿರ ಮಠದ ಸಂಸ್ಥಾನಾಧೀಶರಾದ ಶ್ರೀಮನ್ನಿರಂಜನ ಪ್ರಣವಸ್ವರೂಪ ಜಗದ್ಗುರು ಶ್ರೀ ಗಂಗಾಧರ ಸ್ವಾಮಿಗಳವರು ಶಿವಯೋಗ ಮಂದಿರದಲ್ಲಿ ತಮ್ಮ ಜ್ಞಾನಾರ್ಜನೆ ಮತ್ತು ಶೀಲಕ್ಕೆ ಕೊನೆಯ ಮೆರಗನ್ನು ಪಡೆದಿದ್ದಾರೆ. ಇಂಥ ಎಷ್ಟೋ ಶ್ರೀಗಳವರು ಶಿವಯೋಗಮಂದಿರದಿಂದ ಹೊರಬಿದ್ದು ವೀರಶೈವ ಸಮಾಜದ ಕಲ್ಯಾಣದಲ್ಲಿ ನಿರತರಾಗಿದ್ದಾರೆ. ಹಾನಗಲ್ಲ ಶ್ರೀಕುಮಾರಸ್ವಾಮಿಗಳ ಮತ್ತೊಂದು ಧ್ಯೇಯ ಪಾಶ್ಚಾತ್ಯ ತತ್ವಜ್ಞಾನವನ್ನು ತುಲನಾತ್ಮಕ ದೃಷ್ಟಿಯಿಂದ ಅಭ್ಯಾಸ ಮಾಡಿಸುವದಾಗಿತ್ತು. ವಿದ್ಯಾಭಿಮಾನಿ-

ಗಳಾದ ಅವರು ಪೂರ್ವಾಶ್ರಮದಲ್ಲಿ ಕೇವಲ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿದ್ದರೂ ತತ್ವಜ್ಞಾನ ಲಾಲಸೆಯಿಂದ, ಅಸಾಧಾರಣ ಪಾಂಡಿತ್ಯದಿಂದ ಮತ್ತು ಸಮಾಜಕಲ್ಯಾಣದ ದೃಷ್ಟಿಯಿಂದ ಈ ಶಿವಯೋಗ ಮಂದಿರಕ್ಕೆ ಒಂದು ಮೂರ್ತಿಸ್ವರೂಪ ಕೊಟ್ಟು ಖ್ಯಾತಿ ಪಡೆದಿದ್ದಾರೆ.



**ಹಾನಗಲ್ಲ ಶ್ರೀ ಕುಮಾರಸ್ವಾಮಿಗಳು**

ಇಂದು ಶಿವಯೋಗಮಂದಿರವು ವಿದ್ಯಾಭಿವೃದ್ಧಿ, ವೀರಶೈವ ತತ್ವಜ್ಞಾನ ಪ್ರಸಾರಕಾರ್ಯಗಳನ್ನು ಮಾಡುತ್ತ ಬೆಳೆದುಬಂದ ಸಂಸ್ಥೆಯಾಗಿದೆ. ಇದರ ವಿಧಾಯಕ ವ್ಯವಸ್ಥೆಗಾಗಿ ಒಂದು ವಿಶ್ವಸ್ಥ ಸಂಸ್ಥೆಯಿದೆ. ಅಲ್ಲಿ ರೇವಣಸಿದ್ಧೇಶ್ವರ ವಾಚನಾಲಯ, ಹಸ್ತಲಿಖಿತ ಗ್ರಂಥಭಾಂಡಾರ, ಸದಾಶಿವ ಮುದ್ರಣಾಲಯ, ಶಿವಯೋಗವನ್ನು ಬೋಧಿಸುವ ಪಾಠಶಾಲಾ, ಗೋಶಾಲಾ, ಹಾನಗಲ್ಲ ಶ್ರೀ ಕುಮಾರಸ್ವಾಮಿಗಳ ಸಮಾಧಿಮೊದಲಾದವುಗಳಿವೆ. ಈ ಸಂಸ್ಥೆಯು 'ಸುಕುಮಾರ' ಎಂಬ ನಿಯತಕಾಲಿಕವನ್ನು ಪ್ರಕಟಸುತ್ತಿದೆ. ಅದರಿಂದ

‘ ಹಮ್ಮೀರಕಾವ್ಯ ’ ಮತ್ತು ‘ ಕುಮಾರೇಶ್ವರ ಪುರಾಣ ’ ಎಂಬ ಗ್ರಂಥಗಳ ಈಗಾಗಲೆ ಪ್ರಕಟವಾಗಿವೆ. ಕುಮಾರೇಶ್ವರ ಪುರಾಣವನ್ನು ದ್ಯಾಂಪುರ ಚೆನ್ನಕವಿ ರಚಿಸಿದ್ದಾರೆ. ಅದರಲ್ಲಿ ಹಾನಗಲ್ಲ ಶ್ರೀಕುಮಾರ ಸ್ವಾಮಿಗಳ ಚರಿತ್ರೆ ವಿವರವಾಗಿ ಬರುತ್ತದೆ.

ಶ್ರೀ ಕುಮಾರಸ್ವಾಮಿಗಳು ಸಂಗೀತಕಲೆಯಲ್ಲಿ ಅಭಿರುಚಿಯುಳ್ಳವರು ಇದ್ದರು. ಅವರು ತಮ್ಮ ಶಿಷ್ಯರಾದ ಶ್ರೀ ಪಂಚಾಕ್ಷರಿ ಗವಾಯಿ ಮೊದಲಾ ವರಿಗೆ ಹಿಂದುಸ್ಥಾನೀ ಸಂಗೀತದ ವಿದ್ಯಾವ್ಯಾಸಂಗ ಮಾಡಿಸಿ ಉತ್ತರ ಕರ್ನಾಟಕದಲ್ಲಿ ಹಿಂದುಸ್ಥಾನೀ ಸಂಗೀತವನ್ನು ಕೆಲಮಟ್ಟಿಗೆ ಪ್ರಚಾರ ಮಾಡಿಸಿದ್ದಾರೆ.

ಮಹಾಶಿವರಾತ್ರಿಯ ದಿನ ಶಿವಯೋಗಮಂದಿರದಲ್ಲಿ ದೊಡ್ಡ ಜಾತ್ರೆ ಕೂಡುವದು. ಆಗ ವಿದ್ವಜ್ಜನರ ಕೀರ್ತನ, ಪುರಾಣ, ಪ್ರವಚನ ಇತ್ಯಾದಿ ವಿಶೇಷ ಕಾರ್ಯಕ್ರಮಗಳಿರುತ್ತವೆ.

ಶಿವಯೋಗಮಂದಿರವು ಬನಶಂಕರಿಯಿಂದ ನಾಲ್ಕುಮೈಲಿದ್ದು ಬಾದಾಮಿ-ಯಿಂದ ಮಹಾಕೂಟ, ಪಟ್ಟದಕಲ್ಲಿಗೆ ಹೋಗುವ ಮಾರ್ಗದಲ್ಲಿರುವದು. ಅದು ಆತಿಥ್ಯಕ್ಕೆ ಹೆಸರಾಗಿದೆ.

---